ಟೀ॥ ನನೆಯುಂಡ ಉಂಟಾದ ನೋವು, ನವೆ, ಇದಕ್ಕೆ ಎಲಿಜೀಸ್ಸೊಪ್ಪಿನರಸ ಲ್ಲಾದರೂ, ಪುಳ್ಳಂಪುರುಚೆಸೊಪ್ಪಿನರಸದಲ್ಲಾದರೂ, ಅದರ ನಾಲ್ಕುಪಾಲಷ್ಟೊ ಕ್ಕೊಂದುಪಾಲು ತುಪ್ಪವನ್ನುಬೆರಿಸಿ, ತುಪ್ಪದಸರಿಹಾಲುಕೂಡಸಿ, ಶುಂಠಿಯನ್ನೂ ಸರಿನಲ್ಲಿ ಅರದು ಕದಡಿ ತುಪ್ಪಉಳಿಯುಕಾಯಿಸಿ ಆತುಪ್ಪವನ್ನು ಬಿಸಿಸಾಗಿಷ್ಟೊ ರಟಿರುವ ನನೆಗೆ ಕಡಿಚಿ ಮೃದುಮಾಡಿಕೊಂಡು ಮೆಲ್ಲಗೆ ಒಳಕ್ಕೆ ತಳ್ಳುವದು.

ಶ್ಲೋ॥ ಕುರ್ಯಾತ್ಕೌಪೀನವದ್ಬಂಧಂಮಧ್ಯೇಛಿದ್ರೇಣಚರ್ಮಣಾಂ॥

ಟೀ॥ ಆಡಿನಚರ್ಮದಲ್ಲಿ ಕೌಪೀನಾಕಾರವಾಗಿ ನಡುವೆ ಅಗಲವಾಗಿ ಅಪಾನ ದ್ವಾರದಸರಿತಕ್ಕೆ ಛಿದ್ರವಂಮಾಡಿ ಕಟ್ಟಿಯಿರಿಸುವಣ, ಹೀಗೆ ನಾಲ್ಕುಹೊ ತ್ತುಕಟ್ಟಿಯಿರಿಸಲು ಹೊರಟನನೆ ಒಳಕ್ಕೆ ಹೋಗುವುದು.

ಶ್ಲೋ॥ದಶಮೂಲಕರಂಜವಿಶ್ವಸಿದ್ಧೇ।ಸಲಿಲೇದಧ್ನಿಚಸಾಧಯೇತ್ತೈಲಂ॥ಲವ
ಣಾಮರದಾರುಚವ್ಯಕೃಷ್ಣಾ।ಕಣಮೂಲಾಗ್ನಿಪಿಷ್ಟೈಃಪ್ರವಾಹಿಕಾಯಾಂ॥

ಟೀ॥ ದಶಮೂಲ, ಹೊಂಗೆತೊಕ್ಕು, ಶುಂಠಿ. ಇಷ್ಟನ್ನು ಕಷಾಯವಕಾ ಯಿಸಿ, ಆಕಷಾಯದ ನಾಲ್ಕರೊಳ್ಳೊಂದುಪಾಲು ಎಣ್ಣೆಯನ್ನುಬೆರಿಸಿ, ಎಣ್ಣೆ ಗೆಸರಿಯಾಗಿ ಮೊಸರಂಬೆರಿಸಿ ಪಾಕವಮಾಡುವಾಗ ಅದಕ್ಕೆ ಹಾಕತಕ್ಕ ಕಲ್ಕದ್ರವ್ಯ.— ಸೈಂಧವಲವಣ, ದೇವದಾರು, ಚವ್ಯ, ಹಿಪ್ಪಲಿ, ಹಿಪ್ಪಲಿಮೂ ಲ, ಚಿತ್ರಮೂಲ, ಅತಿಬಜೆ, ಇವಷ್ಟನ್ನು ಸಣ್ಣನಾಗಿಚೂರ್ಣಿಸಿ, ಆಎಣ್ಣೆ ಯಲ್ಲಿ ಕದಡಿ ಕಾಯಿಸಿ ಪಾಕದಲ್ಲಿ ಇಳುಹಿ ಸೇವಿಸಲು ಸರ್ವಾತಿಸಾರಹರ.

( ಕಾಶ್ಯಪರ ಮತದಲ್ಲಿ. )

ಶ್ಲೋ॥ ಖಟ್ವಾಂಗಂಮಧಿತೇನತದ್ಭವರಸಂತಾಂದ್ರೇಣಮುಸ್ತಾಮಹಾ॥
ಪಾಠಾಧಾತಕಿಬಿಲ್ವಮೋಚರಸಜಂಕಲ್ಕಂಗುಳೇನಾನ್ವಿತಂ॥ ಕ್ವಾಥಂ
ವಾರಳುತಿಂದುದಾಡಿಮಭವಂಸರ್ವಾತಿಸಾರೇಪಿಬೇತ್। ಜಂಬ್ವಾಮ್ರಾ
ಸ್ಥಿಶಿರೀಟಪದ್ಮಫಲಿನೀಕುಷ್ಠಾಂಬುಮಧ್ವೋಷಿತಂ॥

ಟೀ॥ ಹೆಂಮರದತ್ವಕ್ಕನ್ನು ಮಜ್ಜಿಗೆಯಲ್ಲಿಕುಳಿದು ಹಿಂಡಿಕೊಂಡು ಕೊಡಿ ಸಲು ಅತಿಸಾರಹರ. ಅದಲ್ಲದೆಯಿದ್ದರೆ ಅದರಸೊಪ್ಪಂ ಕುಳಿದು ಮುದ್ದೆಯ ಮಾಡಿ ಅದಕ್ಕೆ ಕೆಂಮಣ್ಣಿನ ಶೀರಮಣ್ಣೊಂದು ಕೆಂಡದಲ್ಲಿ ಸ್ವಲ್ಪಬೇಯಿಸಿ ಕೆ ಗದು ಹಿಂಡಿಕೊಂಡು ಜೇನುತುಪ್ಪ ಬೆರಸಿಕೊಡುವುದು. ಅದಲ್ಲದಿದ್ದರೆ ಕೊನ್ನಾರಿಗಡ್ಡೆ, ಅಗಿಲುಶುಂಠಿ, ಧಾತಕೀಕುಸುಮ, ಬಿಲ್ಲವತ್ತದಚಿಗುರು, ಎಲ

ಪದರುಗಿನ, ಇಷ್ಟನ್ನೂ ಮಜ್ಜಿಗೆಯಲ್ಲಿಅರದು ಕಲ್ಕವಮಾಡಿ ಮಜ್ಜಿಗೆಯ ಲ್ಲಿಮೇಕದಡಿ ಸ್ವಲ್ಪ ಬೆಲ್ಲವಕೂಡಿಸಿ ಕೊಡಿಸುವುದು. ಅದಲ್ಲದಿದ್ದರೆ ಪೇರು ರದತೊಕ್ಕು, ಕೂಬರದತೊಕ್ಕು, ದಾಳಿಂಬದತೊಕ್ಕು ಇಷ್ಟನ್ನೂ ಕಷಾ ಯವಕಾಯಿಸಿಕೊಡಿಸಲು ಸರ್ವಾತಿಸಾರಹರ. ಅದಲ್ಲದಿದ್ದರೆ ನೇರಿಲಚಕ್ಕೆ, ಮಾವಿನಬಿತ್ತ, ಮತ್ತೀಚಕ್ಕೆ, ಪದ್ಮಕ, ನೆಲ್ಲಚಕ್ಕೆ, ಇವನ್ನು ಅಕ್ಕಿಗ ಚ್ಚಿನಲ್ಲಿಅರದು ಕಡಿಡಿ ಜೇನುತುಪ್ಪವೆರಸಿ ಕೊಡೆ ಸರ್ವಾತಿಸಾರಪರಿಹಾರ.

(ಮಹಾಂಕರದಲ್ಲಿ.)

ಶ್ಲೋ॥ಪುಟಪಕ್ವಕಾಳಕದಳೀಪುಷ್ಪಸ್ವರಸಸ್ಸಮಾಕ್ಷಿಕಃಪೀತಃ।
ಸರ್ವಾತಿಸಾರಶಮನಃಪ್ರವಾಹಿಕಾಮಾಶುನಾಶಯತಿ ॥

ಟೀ॥ ಕಾಡುಬಾಳೆಹೂವಿನಮೇಲೆಕೆಂಮಣ್ಣುಮೆತ್ತಿ ಕೆಂಡದಮೇಲಿರಿಸಿ ತೆಗದು ಹಿಂಡಿಕೊಂಡು ಜೇನುತುಪ್ಪವೆರಸಿ ಕೊಡಿಸಲು ಸರ್ವಾತಿಸಾರಹರ.

ಶ್ಲೋ॥ ಆಜೇನದಧ್ನಾಭುಂಜೀತನಿಸ್ಸಾರಣನಿಪೀಡಿತಃ ॥

ಟೀ॥ ಅತಿಸಾರದಿಂದ ಬಹುಪೀಡೆಯುಂಟಾದವನು ಆಡಿನಮೊಸರಿಂದ ಪಥ್ಯವ ತೆಗದುಕೊಂಬುದು.

(ಅತ್ರಿ ಮಕದಲ್ಲಿ.)

ಶ್ಲೋ॥ ಲಶುನಾವಷಧವರ್ಷಾಭೂಪಿತ್ತಂಭಾಗಪಯಃಪಿಬೇತ್ ॥
ಬಧಿರಂಕಷ್ಟಕಿಲಜಂಲೇಪಯೇಚ್ಛೂಲವಾರಣೇ ॥

ಟೀ॥ ಬೆಳ್ಳುಳ್ಳಿ, ಶುಂಠಿ, ಅಡಕೆಪುಟ್ಟನಬೇರು, ಇಷ್ಟನ್ನೂ ಜಜ್ಜುಗುಟ್ಟಿ ಆಡಿನಹಾ ಲಲ್ಲಿಹಾಕಿಬೇಯಿಸಿ ಹಿಂಡಿಕೊಂಡು, ಆಹಾಲಂ ಕೊಡಿಸಲು ಸರ್ವಾತಿ ಸಾರಹರ. ಎಳ್ಳೆಣ್ಣೆಯಂಬಳಕ್ಕೆ ಪಾನವಮಾಡಿಸುವುದು. ಹೊರಕ್ಕೆ ಲೇಪನ ವಮಾಡಿಸುವುದು. ಉದರಶೂಲೆಹರ.

ಶ್ಲೋ॥ ಶಾರ್ಙ್ಗೇಷ್ಟನಕ್ತಮಾಲತ್ವಕ್ ಜಂಬ್ವಾರ್ತ್ವಕೂಷ್ಮಾಂಡಿಕಕ್ಷಸಃ।ಬೃ
ಹತೀಮೂಲವಲ್ಕತ್ವಕ್ ಭಾರ್ಙ್ಗೀವ್ಯೋಷಂಹರೀತಕೀ ॥ಅಜಾಮೋ
ದೈಕ್ಷೈಸ್ಸ್ವಾತ್ ಖಲಂಸಿದ್ಧಂವ್ಯಪೋಹತಿ ॥

ಟೀ॥ ಕಿರುಗಡಸಿಗೆತೊಕ್ಕು, ಹೊಂಗೆತೊಕ್ಕು, ನೇರಿಲತೊಕ್ಕು, ಕಿವಸ ದನಾರು, ಗುಳ್ಳದಬೇರಿನತೊಕ್ಕು, ಗಂಟುಭಾರಂಗಿ, ಶುಂಠಿ, ಮೆಣಸು, ಹಿಪ್ಪ ಲಿ, ಅಳಲೇಕಾಯಿ, ವಾದಕ್ಕಿ, ಇವಷ್ಟನ್ನೂ ಸಮಾಂಶವಾಗಿ ಮಜ್ಜಿಗೆಯಲ್ಲಿ

ಅರದು ಮಜ್ಜಿಗೆಯಲ್ಲೇಕದಡಿ ಕಾಯಿಸಿ ಪಳಿದ್ಯವಂಮಾಡಿ ಜೆಂಗುಬಿಟ್ಟು ಒಗ್ಗರಿ ಊಟದಲ್ಲಿಸೇವಿಸಲು ಸರ್ವಾತಿಸಾರಪರಿಹಾರ.

(ಸರ್ವಾತಿಸಾರಕ್ಕೆ ತಿಂತ್ರಿಣೀವಟಕ.)

ಶ್ಲೋ॥ ತ್ವಚಂತಿಂತ್ರಿಣಿಮೂಲಸ್ಯಜಂಬೂಖಟ್ವಾಂಗಜಾದ್ರಸಾತ್ । ಪುನಶ್ಚಾಂದೀಕೃತಂಪಕ್ವಾಖದಿರಂಸಾರಚೂರ್ಣಿತಂ ॥ ಸಮ್ಮಿಶ್ರವಟಕಾಕೃತ್ವಾಪಶ್ಚಾದ್ಭಂಗಿಸಮನ್ವಿತಂ । ದದ್ಯಾನ್ನಿಷ್ಕತ್ರಯಂಯೋಜ್ಯಾಮತಿಸಾರಂಚಿರಂತನಂ । ಸರ್ವಾತಿಸಾರಶಮನಂಗ್ರಹಣೀದೋಷನಾಶನಂ ॥

ಟೀ॥ ನೇರಿಲತೊಕ್ಕೆ, ಹೆಮ್ಮರದತೊಕ್ಕೆ, ಇವೆರಡರಸ್ವರಸವನ್ನಾದರು ಕಷಾಯವನ್ನಾದರು ಶೋಧಿಸಿಕೊಂಡು ಅದರಲ್ಲಿ ಹುಣಸೇಬೇರ ತೊಕ್ಕೆನ್ನು ಸಣ್ಣನಾಗಿ ಅರದು ಪಾಕವಮಾಡಿ ತೇಹ್ಯದಹಾಗೆ ಪಾಕಬಂದಸಮಯದಲ್ಲಿ ಕಾಚಿನಚೂರ್ಣವಹಾಕಿ ಕೊಳಸಿ ಗಜ್ಜುಗದ ಕಾಯಿಪ್ರಮಾಣದಷ್ಟು ವಟಕವಮಾಡಿ ಅತಿಸಾರಕ್ಕೆ ಮೂರುವರಹತೂಕ ಭಂಗೀಚೂರ್ಣಸಹಿತಟ್ಟು ಮೊಸರಿನಲ್ಲಿ ಕೊಡಿಸಲು ಸರ್ವಾತಿಸಾರಗ್ರಹಣಿಗಳಂ ಪರಿಹರಿಸುವುದು.

(ಅತಿಸಾರಕ್ಕೆ ಶುಂಠೀಘೃತ.)

ಶ್ಲೋ ॥ ಶುಂಠ್ಯಾಸ್ತುದ್ವಾದಶಪಲಂಜಲದ್ರೋಣೇವಿಪಾಚಯೇತ್ । ಚತುರ್ಭಾಗಾವಶಿಷ್ಟಂತುಕಷಾಯಮವತಾರಯೇತ್ ॥ ಕಲ್ಕದ್ರವ್ಯಮಿದಂದದ್ಯಾದುದುಂಬರಫಲೋಪಮಂ । ಪಿಪ್ಪಲೀಪಿಪ್ಪಲೀಮೂಲಂಚಿತ್ರಕಂ ಹಸ್ತಿಪಿಪ್ಪಲೀ ॥ ಮುಸ್ತಾಜಾತಿವಿಷಾಚೈವಮಹಾನಿಂಬಫಲಾನಿಚ । ಕಾಲಜಾಜಿವಚಾಹಿಂಗುಗಜಾಮೋದಂಕಥೈವಚ ॥ ಸಸೈಂಧವಂಮೋಚರಸಂಸೂಕ್ಷ್ಮಂದೃಷದಿಪೇಷಯೇತ್ । ಸರ್ಪಿಷಃಪ್ರಸ್ಥಮಾದಾಯದ್ವಿಪ್ರಸ್ಥಂಕ್ಷೀರಮಾವಪೇತ್ ॥ ಶನೈರ್ಮೃದ್ವಗ್ನಿನಾಸಮ್ಯಕ್ ಮೃದುಪಾಕೇ ಭಿಷಗ್ವರೈಃ । ಅವತಾರ್ಯಘೃತಂದೇಯಂಗ್ರಹಣ್ಯಾಮಗ್ನಿಮಾಂದ್ಯಕೇ ॥ ಕುಕ್ಷಿರೋಗೇಗುಲ್ಮರೋಗೇಪ್ಲೀಹಾನಾಹೋದರಾಮಯೇ । ಕಾಸಶ್ವಾಸೇಷುಯಚ್ಚೈವಸರ್ವವ್ಯಾಧಿಷುಪೂಜಿತಂ ॥ ಶುಂಠೀಘೃತಮಿದಂನಾಮ್ನಾಶ್ರೇಷ್ಠಂಕಾಶ್ಯಪನಿರ್ಮಿತಂ ॥

ಟೀ. ॥ ಘಟ್ಟಿಯಾಗಿರುವಶುಂಠಿ ಹದಿನೆಂಟುಹಲ ನಾಗಳನೀರಿನಲ್ಲಿ ಕಷಾಯನಿತ್ತಿ ಚತುರ್ಭಾಗಾವಶೇಷಿತವಾಗಿ ಕಾಯಿಸಿ ಶೋಧಿಸಿಕೊಂಡು, ಅದರಲಿ

೧ ಬಳ್ಳಕುಪ್ಪವನ್ನೂ ೨ ಬಳ್ಳ ಉಸುವಿನಹಾಲನ್ನೂ ಹುಯ್ದು ಪಾಕವಮಾಡು
ವಾಗ ಅದಕ್ಕೆ ಹಾಕುವಕಲ್ಕದ್ರವ್ಯ,—ಹಿಪ್ಪಲಿ, ಹಿಪ್ಪಲಿಮೂಲ, ಚಿತ್ರಮೂಲ,
ಗಜಹಿಪ್ಪಲಿ, ಭದ್ರಮುಸ್ತೆ, ಅತಿಬಜೆ, ಕುರಕಬೇವಿನಕಾಯಿ, ಕರೀಜೀರಿಗೆ, ಬಜೆ,
ಹಿಂಗು, ವಾದಕ್ಕೆ. ಸೈಂಧವ, ಯಲವದಉಗಿನು, ಇಷ್ಟನ್ನೂ ಪ್ರತ್ಯೇಕ ೮ ವರಹ
ತೂಕವಂ ಸೂಕ್ಷ್ಮವಾಗಿ ಚೂರ್ಣಿಸಿ ಆ ಕುಪ್ಪದಲ್ಲಿ ಕಲೆಸಿ ಸ್ವಾದ್ವಗ್ನಿಯಿಂದ
ಮೃದುಪಾಕದಲ್ಲಿಯೇ ಕುಪ್ಪವಯಿಳುಹಿಕೊಂಡು, ವೈದ್ಯಶ್ರೇಷ್ಠನು ಕೊಡಿ
ಸಲು ಗ್ರಹಣಿ, ಅಗ್ನಿಮಾಂದ್ಯ, ಉದರರೋಗ, ಗುಲ್ಮರೋಗ, ಹೊಟ್ಟೆಯು
ಬ್ಬರ. ಪ್ಲೀಹ, ಶ್ವಾಸ, ಕಾಸ, ಕ್ಷಯ, ಇವೆಲ್ಲವೂ ಪರಿಹಾರವಹವು.

(ಅತಿಸಾರ ಶಮನಲಕ್ಷಣ.)

ಶ್ಲೋ ॥ ಯಸ್ಯೋಚ್ಚಾರಾದ್ವಿನಾಮೂತ್ರಂ ಪವನೋವಾಪ್ರವರ್ತತೇ ।
ದೀಪ್ತಾಗ್ನೇರ್ಲಘುಕೋಷ್ಠಸ್ಯಾಚ್ಛಾಂತಂತಸ್ಯೋದರಾಮಯಂ ॥

ಟೀ॥ ಯಾವನು ಕಾಲಹೊರತಾಗಿ ಬರೀಮೂತ್ರವಂ ಬಿಡುತ್ತಾನೋ, ಯಾವನಿಗೆ
ಹೊತ್ತಿಗೊತ್ತಿಗೆ ವಾಯುನಡೆಯುತ್ತಿರುವದೋ ಆತನಿಗೆ ಅಗ್ನಿ ದೀಪನವಾಗಿ
ಕೋಷ್ಠಲಘುವಾಗಿ ಯಿದ್ದೀತು. ಆತನಿಗೆ ಅತಿಸಾರ ಶಮನವಾಯಿತೆಂದರಿವುದು.

( ಗ್ರಹಣೀಚಿಕಿತ್ಸೆ. )

ಶ್ಲೋ॥ ಕ್ವಚಿದಾಮಂಕ್ವಚಿತ್ಪಕ್ವಂಜೀರ್ಣಾಜೀರ್ಣಂಕ್ವಚಿತ್ಕ್ವಚಿತ್ ।
ಏವಂಚಿರಕೃತಂತಾವಾತ್ ಗ್ರಹಣೀದೋಷಮಾವಿಶೇತ್ ॥

ಟೀ॥ ಒಂದುವೇಳೆ ಅಜೀರ್ಣವಾಗಿ ಹೊಟ್ಟೆಹೋಗುವಣ, ಮತ್ತೊಂದುವೇಳೆ ಜೀ
ರ್ಣವಾಗದೆ ಹೊಟ್ಟೆಹೋಗುವಣ, ಮತ್ತೊಂದುವೇಳೆ ಕೊಂಡಆಹಾರದಲ್ಲಿ ಕೆ
ಲವುಜೀರ್ಣವಾಗಿ ಕೆಲವು ಅಜೀರ್ಣವಾಗಿ ಹೋಗುವಣ, ಯಾಪ್ರಕಾರ ಬಹಳ
ದಿನನಡೆದು ಹೊಟ್ಟೆಹೋಗುವಭಾವವೇ ಗ್ರಹಣಿದೋಷವೆನ್ನಿಸಿಕೊಂಬುದು.

ಶ್ಲೋ॥ ಅತಿಸಾರೇಷುಯೋನಾತಿಯತ್ನವಾನ್ ಗ್ರಹಣೀಗದಃ । ತಸ್ಯಸ್ಯಾ
ದಗ್ನಿವಿಧ್ವಂಸಕರ್ತೈರತ್ಯರ್ಥಸೇವಿತೈಃ ॥

ಟೀ॥ ಯಾವನಿಗೆ ಅತಿಸಾರವಾಗಿ ಯಿರುವಲ್ಲಿಯೂ ಯತ್ನಪಡದೇನೇ ಉಪೇ
ಕ್ಷೆಮಾಡುತ್ತಾನೋ ಆತನಿಗೆ ಅಗ್ನಿಮಾಂದ್ಯಕರಗಳಾದ ಆಹಾರಗಳ ಅತಿ
ಸೇವನೆಯಿಂದ ಗ್ರಹಣಿಯುಂಟಾಗುವುದು.

ಶ್ಲೋ ॥ ಸಚತುರ್ಧಾಪೃಥಗ್ದೋಷೈಃಸನ್ನಿಪಾತಾಚ್ಚಜಾಯತೇ ॥

ಟೀ ॥ ಆಗ್ರಹಣಿ, ವಾತಗ್ರಹಣಿ, ಪಿತ್ತಗ್ರಹಣಿ, ಶ್ಲೇಷ್ಮಗ್ರಹಣಿ, ಸನ್ನಿಪಾತಗ್ರಹಣಿ ಎಂದು ನಾಲ್ಕು ಪ್ರಕಾರ.

ಶ್ಲೋ ॥ ಗ್ರಹಣ್ಯಾಂಪಾಚನಂಪೂರ್ವಂಮಧ್ಯೇಲಂಘನಪಾಚನಂ ।
ಅಂತೇಗ್ನಿದೀಪನಂದದ್ಯಾದತಿಸಾರೇಪ್ಯಯಂವಿಧಿಃ॥

ಟೀ ॥ ಗ್ರಹಣಿಯಲ್ಲಿ ಮೊದಲು ಪಾಚನಕ್ರಿಯೆಯಂ ಮಾಡುವುದು. ಆಮೇಲೆ ಮಧ್ಯದಲ್ಲಿ ಲಂಘನಪಾಚನಗಳೆರಡನ್ನೂ ಮಾಡಿಸುವುದು. ಕಡೆಯಲ್ಲಿ ಅಗ್ನಿದೀಪನಕರವಾದ ಕ್ರಿಯೆಯನ್ನೇ ಮಾಡಿಸುವುದು. ಅತಿಸಾರಕ್ಕೆ ಯಿದೇಕ್ರಮವಾಗಿ ಮಾಡಿಸಬೇಕು.

ಶ್ಲೋ ॥ ವರ್ಜಯೇದ್ಗ್ರಹಣೀರೋಗಾರ್ತಂಕ್ಷೀಯಮಾಣಬಲಾನಲಂ ॥

ಟೀ ॥ ಗ್ರಹಣಿರೋಗವುಳ್ಳಾತನು ದಿನದಿನಕ್ಕೆ ಬಲಕ್ಷಯ ಅಗ್ನಿಮಾಂದ್ಯವುಳ್ಳವನಾದರೆ ಆತನಿಗೆ ಚಿಕಿತ್ಸೆಯಂ ಮಾಡಬಾರದು. ಅದು ಅಸಾಧ್ಯ.

( ವೈದ್ಯಾಮೃತದಲ್ಲಿ, )

ಶ್ಲೋ ॥ ಪಾಠಾಕರಂಜದ್ವಯಪಂಚಕೋಲೈಃ । ಕೈಡರ್ಯಪಥ್ಯಾಶನಪುಂಖಬಿಲ್ವೈಃ ॥ ಕ್ವಾಥೋನಿರುನ್ಯಾತ್ಕಣಚೂರ್ಣಯುಕ್ತೋ । ಗುಲ್ಮಾಗ್ನಿಸಾದಗ್ರಹಣೀಗುದೋತ್ಥಾನ್ ॥

ಟೀ ॥ ಅಗಿಲುಶುಂಠಿ, ಹೊಂಗೆಕೊಕ್ಕು, ಪಂಚಕೋಲ, ಕರಿಬೇವು, ಅಳಲೇಕಾಯಿ, ಮುಳ್ಳುಕೊಗ್ಗಿ, ಬಿಲ್ಲಪತ್ರದ ಕಾಯಿ, ಇವಷ್ಟನ್ನೂ ಪ್ರತ್ಯೇಕ ೧ ವರಹತೂಕವನ್ನು ಒಂದುಬಳ್ಳನೀರಿನಲ್ಲಿ ಕಷಾಯವಿಕ್ಕಿ ಅಷ್ಟಾವಶೇಷವಾಗಿ ಕಾಯಿಸಿ ಹಿಪ್ಪಲೀಚೂರ್ಣ ೧ ವರಹತೂಕವಂ ಪ್ರತಿವಾಪವಹಾಕಿಕೊಡಿಸಲು ಗ್ರಹಣಿ, ಅತಿಸಾರ, ಅಗ್ನಿಮಾಂದ್ಯ, ಗುದಭ್ರಂಶ, ಇವೆಲ್ಲವೂ ಪರಿಹಾರವಹುವು.

(ತಂತ್ರಾಂತರದಲ್ಲಿ.)

ಶ್ಲೋ ॥ ಜೀರಕೇನಕರಂಜೇನಶರಪುಂಖೇನವಹ್ನಿನಾ ॥ ಚಿರಬಿಲ್ವೇನಬಿಲ್ವೇನಚವ್ಯೇನಗ್ರಂಥಿಕೇನಚ ॥ ಏಕೈಕೇನಾಪಿಸರ್ವೈರ್ವಾಸಂಯುಕ್ತಂವಿಶ್ವಭೇಷಜಂ । ಕುಕ್ಷ್ಯಾಮಯಾನಶೇಷೇಣನಿರುನ್ಯಾದಗ್ನಿದೀಪನಂ॥ ಗ್ರಹಣ್ಯಾದ್ಯಾಪದಸ್ಸರ್ವಾ ಸಾಕಲ್ಯೇನವ್ಯಪೋಹತಿ ॥

ಟೀ ॥ ಜೀರಿಗೆ, ತವಸದಚಕ್ಕೆ, ಮುಳ್ಳುಕೊಗ್ಗಿ, ಚಿತ್ರಮೂಲ, ಹೊಂಗೆ

ಕೆಕ್ಕು, ಚವ್ಯ, ಹಿಪ್ಪಲೀಮೂಲ, ಈ ೮ ಔಷಧಗಳಲ್ಲಿ ಜೀರಿಗೆಮೊದಲಾದ ಪ್ರತ್ಯೇಕ ಔಷಧಗೂಡಿ ಶುಂಠಿಕಷಾಯವನ್ನಾದರೂ ಕೊಡಿಸಲು ಹೊಟ್ಟೆನೋವು ಪರಿಹಾರವಹುದು, ಅಗ್ನಿದೀಪನವಹುದು, ಗ್ರಹಣಿಯಿಂದುಂಟಾದ ಸಕಲ ಬಾಧೆಗಳೂ ಪರಿಹಾರವಹುವು.

( ಅಗ್ನಿವೇಶೀಯದಲ್ಲಿ. )

ಶ್ಲೋ ॥ ಶರಪುಂಖಕಷಾಯೇಣಶಾರ್ಙ್ಗೇಷ್ಟಶ್ರ್ವಧಿತೇನವಾ । ಪಿಬೇದತ್ತುಮಿತಂವಿಶ್ವಂಭುಕ್ತ್ವಾದೌಗ್ರಹಣೀಂಹರೇತ್ ॥

ಟೀ ॥ ಮುಳ್ಳುಕೊಗ್ಗಿಯ ಕಷಾಯದಲ್ಲಾದರೂ ೮ ವರಹತೂಕ ಶುಂಠಿ ಚೂರ್ಣವನ್ನು ಪ್ರತಿವಾಪವಾಗಿ ಹಾಕಿ ಕೊಡಿಸಲು ಗ್ರಹಣಿವ್ಯಾಧಿಹರ.

( ಅಗ್ನಿಮುಖಚೂರ್ಣ. )

ಶ್ಲೋ ॥ ಹಿಂಗುಭಾಗೋಭವೇದೇಕೋವಚಾಯಾದ್ವಿಗುಣೋಭವೇತ್ । ತ್ರಿಗುಣೋಭಾಗಾವಿಡಂಗಾನಾಂಚತ್ವಾರಸ್ಸೈಂಧವಸ್ಯತು ॥ ಪಂಚಭಾಗಾಯವಾನ್ಯಾಸ್ತುಹರೀತಕ್ಯಾಸ್ತುಷಡ್ಭವೇತ್ । ವನ್ಹಿಸ್ತುಸಪ್ತಭಾಗಸ್ಯಾತ್ಕೋಷ್ಟಸ್ಯಾಷ್ಟಗುಣಾಸ್ಮೃತಾಃ॥ ಪಿಪ್ಪಲ್ಯಾಸ್ತುನವಾಂಶಾಸ್ಸ್ಯುಃದಶಭಾಗಸ್ತುಜೀರಕಾತ್ । ಏವಚೂರ್ಣವರೋದಿಷ್ಟೋಜ್ವರೇಜೀರ್ಣೇಽಭಿಷಗ್ವರೈಃ॥ ಉಷ್ಣೋದಕೇನವಾದೇಯೋದೇಯೋದಧ್ನಾಥವಾಸಕುಃ ಪ್ಲೀಹೋದರಂಚಗುಲ್ಮಂಚಭುಕ್ತಂಯಸ್ಯನಜೀರ್ಯತಿ॥ ಅಂಗಂವಾಯಸ್ಯಜೀರ್ಯೇತವಿಷಂವಾಯೇನಭಕ್ಷಿತಂ । ಗ್ರಹಣೀಪಾಂಡುರೋಗಶ್ಚಕಾಸಶ್ವಾಸಕ್ಷತಕ್ಷಯಃ ॥ ಚೂರ್ಣಮಗ್ನಿಮುಖಂನಾಮಶೀಘ್ರಮಗ್ನಿಪ್ರವರ್ಧನಂ॥

ಟೀ ॥ ಹಿಂಗು ೧ ಭಾಗ, ಬಜೆ ೨ ಭಾಗ, ವಿಳಂಗ ೩ ಭಾಗ, ಸೈಂಧವಲವಣ ೪ ಭಾಗ, ವಾದಕ್ಕು ೫ ಭಾಗ, ಅಳಲೇಕಾಯಿ ೬ ಭಾಗ, ಚಿತ್ರಮೂಲ ೭ ಭಾಗ, ಚಂಗಲಕೋಷ್ಟು ೮ ಭಾಗ, ಹಿಪ್ಪಲಿ ೯ ಭಾಗ, ಜೀರಿಗೆ ೧೦ ಭಾಗ, ಇವಷ್ಟನ್ನೂ ಯಥಾಕ್ರಮದಲ್ಲಿ ಚೂರ್ಣಿಸಿ ವಸ್ತ್ರಗಾಳಿತವಮಾಡಿ, ದಿನಂಪ್ರತಿ ಉದಯಕಾಲದಲ್ಲಿ ೮ ವರಹತೂಕ ಚೂರ್ಣವಂ ಬಿಸಿನೀರಿಂದಲಾದರೂ ಮೊಸರಿನಿಂದಲಾದರೂ ಕೊಡಿಸಲು ಪ್ಲೀಹ, ಮಹೋದರ, ಗುಲ್ಮ, ಅಜೀರ್ಣ, ಅಗ್ನಿಮಾಂದ್ಯ, ಇವೆಲ್ಲವೂ ಪರಿಹಾರವಹುವು. ವೃದ್ಧಾಪ್ಯದವರಿಗೂ ಆಗುವದು. ಇಕ್ಕು ಮದ್ದು ತಾಕಿದವರಿಗೂ ಆಗುವದು. ಗ್ರಹಣೀ, ಪಾಂಡುರೋಗ, ಕಾಸ,

ಶ್ವಾಸ, ಕ್ಷಯ, ಇವೆಲ್ಲವೂ ಪರಿಹಾರವಹುವು. ಘಾಯಪ್ರೊಡದವರಿಗೂ ಹಿತವಹುದು. ಇದು ಅಗ್ನಿಮುಖಚೂರ್ಣವೆನ್ನಿಸಿಕೊಳ್ಳುಬಹುದು. ಶೀಘ್ರದಲ್ಲಿಯೇ ಅಗ್ನಿಯುಂಟುಮಾಡುವುದು.

(ವ್ಯೋಷಾದಿಚೂರ್ಣ.)

ಶ್ಲೋ ॥ ವ್ಯೋಷವಹ್ನಿಜೀರಕಂಫಲತ್ರಿಯಂಚಸೈಂಧವಂ । ಘೃತೇನವಾ ಗುಡೇನವಾಲಿಹೇತ್ಸಮಂಸುಚೂರ್ಣಿತಂ ॥ ಪಾಚನಂಪ್ರರೋಚನಂಪ್ರದೀಪನಂವಿರೇಚನಂ । ವಾತಶೂಲಮೂಲರೋಗನಾಶನಂರಸಾಯನಂ ॥

ಟೀ ॥ ಶುಂಠಿ, ಮೆಣಸು, ಹಿಪ್ಪಲಿ, ಚಿತ್ರಮೂಲ, ಜೀರಿಗೆ, ಅಳಲೇಕಾಯಿ, ನೆಲ್ಲಿಚಟ್ಟು, ತಾರೇಕಾಯಿ, ಸೈಂಧವಲವಣ, ಇವುಗಳನ್ನು ಸಮಾಂಶವಾಗಿ ಚೂರ್ಣಿಸಿ, ವಸ್ತ್ರಗಳಿತವಮಾಡಿ, ೮ ವರಹತೂಕ ಚೂರ್ಣವನ್ನು ಹಸುವಿನತುಪ್ಪದಲ್ಲಾದರೂ, ಬೆಲ್ಲದಲ್ಲಾದರೂ ಕೊಡಿಸಲು ಕೊಂಡಆಹಾರಪಚನವಹುದು, ಅರೋಚಕಪರಿಹಾರವಹುದು, ದೀಪನವುಂಟಾಗುವುದು, ವಿರೇಚನವಹುದು. ವಾತಶೂಲೆ, ಮೂಲರೋಗ, ಇವುಗಳು ಪರಿಹಾರವಹುವು. ಶರೀರದಲ್ಲಿ ರಸಧಾತುವುಹೆಚ್ಚಿ ಪುಷ್ಟಿಯಹುದು.

(ಮಣಿಮಂಥಚೂರ್ಣ.)

ಶ್ಲೋ ॥ ಮಣಿಮಂಥಜೀರಮೋದಮಾಗಧೀಮಹೌಷಧೈ।ರ್ವರ್ಧಿತಂಕ್ರಮೇಣತತ್ಸಮಂಹರೀತಕೀರಜಃ ॥ ಪಾಚನಂಪ್ರರೋಚನಂಚದೀಪನಂವಿರೇಚನಂ । ವಾತಶೂಲಮೂಲರೋಗನಾಶನಂರಸಾಯನಂ ॥

ಟೀ ॥ ಸೈಂಧವಲವಣ, ಜೀರಿಗೆ, ವಾದಕ್ಕಿ, ಹಿಪ್ಪಲಿ, ಶುಂಠಿ, ಇವುಗಳನ್ನು ಕ್ರಮದಿಂದ ಏಕೋತ್ತರವೃದ್ಧಿಯಾಗಿ ಒಂದಕ್ಕೊಂದು ಹೆಚ್ಚಿಸಿ ಇವಿಷ್ಟರ ಸಮ ಅಳಲೇಕಾಯಿಚೂರ್ಣವಂಬೆರಸಿ ೮ ವರಹತೂಕ ಚೂರ್ಣವನ್ನು ಹಸುವಿನತುಪ್ಪದಿಂದಲಾದರೂ ಬಿಸಿನೀರಿಂದಲಾದರೂ ಕೊಡಿಸಲು ಗ್ರಂಥೋಕ್ತಗುಣವುಂಟಾಗುವುದು.

(ಮತಾಂತರದಲ್ಲಿ ವ್ಯೋಷಾದಿಚೂರ್ಣ.)

ಶ್ಲೋ॥ ವ್ಯೋಷೈಲಾಹಿಂಗುಭಾರ್ಙೀವಿಡಲವಣಯವಕ್ಷಾರಪಾಠಾಯವಾನೀ। ಸೂಕ್ಷ್ಮೈಲಾಜಾಜಿಚವ್ಯಂದಹನಕರಿಕಣಾತ್ವಕ್ಪಟುಗ್ರಂಥಿರಾಜೀ॥ ಚೂರ್ಣೀಕೃತ್ವಾಘೃತಾಢ್ಯಂ।ಪ್ರತಿದಿನಮಶನೇಹ್ಯಶ್ನತೋರೋಗಸೇನಾ ।

ವಿಶ್ವಂಚೈಶ್ವಾನರೋಯಂದರಂಕಿಸರಭಸಂಕಿಂಪುನರ್ಭುಕ್ತಮನ್ನಂ ॥

ಟೀ ॥ ಶುಂಠಿ, ಮೆಣಸು, ಹಿಪ್ಪಲಿ, ಏಲಕ್ಕಿ, ಹಿಂಗು, ಗಂಟುಭಾರಂಗಿ, ಬಿಡಾಲವಣ, ಯವಕ್ಷಾರ, ಅಗಿಲುಶುಂಠಿ, ವಾದಕ್ಕಿ, ಸಣ್ಣಏಲಕ್ಕಿ, ಜೀರಿಗೆ, ಚವ್ಯ, ಚಿತ್ರಮೂಲ, ಗಜಹಿಪ್ಪಲಿ, ಲವಂಗದಚಕ್ಕೆ, ಸೈಂಧವ, ಹಿಪ್ಪಲಿಮೂಲ, ಬಿಳೀಸಾಸುವೆ, ಇವನ್ನೆಲ್ಲ ಸಮಾಂಶವಾಗಿ ಚೂರ್ಣಿಸಿ, ಭೋಜನವಂ ಮಾಡುವಾಗ ಮೊದಲು ಮೂರುಕಬಳದಲ್ಲಿ ಯೀ ಚೂರ್ಣವಿಟ್ಟು, ಹಸುವಿನತುಪ್ಪಗೂಡಿಸಿ, ಭುಜಿಸಲು ಸಮಸ್ತರೋಗಸೇನೆಗಳಂ ದಹಿಸಿಬಿಡುವುದು. ಉಂಡ ಅನ್ನವಂ ದಹಿಸಿಬಿಡುವುದು,

(ಲಘ್ವಗ್ನಿಕುಮಾರ.)

ಶ್ಲೋ ॥ ಟಂಕಣಾಮರಿಚಂಕುಷ್ಠಮಯಸ್ಕಾಂತಮರೋಮಲಂ। ಏಕದ್ವಿತ್ರಿಚತುಃಪಂಚಭಾಗಾದಗ್ನಿವಿವರ್ಧನಂ ॥

ಟೀ ॥ ಬಿಳಿಗಾರ, ಮೆಣಸು, ಕುಷ್ಠ, ಅಯಸ್ಕಾಂತ, ಮಂಡೂರ, ಇವುಗಳನ್ನು ಏಕೋತ್ತರವೃದ್ಧಿಯಿಂದ ಹೆಚ್ಚಿಸಿ ಕಾರಗೆಣಸಿನರಸದಲ್ಲಿ ಮರ್ದಿಸಿ, ಗುಂಜಾಪ್ರಮಾಣ ಗುಳಿಗೆಯಂಮಾಡಿ, ಒಂದುಗುಳಿಗೆಯಂ ಹಸೀಕ್ಷೀರಸದಲ್ಲಿ ಕೊಡಲು ಅಗ್ನಿಯುಂಟಾಗುವುದು.

ಶ್ಲೋ ॥ ಸಿಂಧೂತ್ಥವಿಶ್ವವಿಜಯಾಕಣವಹ್ನಿಚೂರ್ಣ । ಮುಷ್ಣಾಂಬುನಾಪಿಬತಿಯಃಕಿಲನಷ್ಟವಹ್ನಿಃ ॥ ತಸ್ಯಾಮಿಷೇಣಬಹುಘೃತೇನಚಭುಕ್ತಮನ್ನಂ। ಭಸ್ಮೀಭವತ್ಯಶಿತಮಾತ್ರಮಪಿಕ್ಷಣೇನ ॥

ಟೀ ॥ ಸೈಂಧವ, ಶುಂಠಿ, ಅಳಲೇಕಾಯಿ, ಹಿಪ್ಪಲಿ, ಚಿತ್ರಮೂಲ, ಇವುಗಳನ್ನು ಸಮಾಂಶವಾಗಿ ಚೂರ್ಣಿಸಿ, ಆಚೂರ್ಣವಂ ಬಿಸಿನೀರಿಂದ ತೆಗೆದುಕೊಳ್ಳಲು ತುಪ್ಪಗೂಡಿದ ಮಾಂಸಾಹಾರ ಮೊದಲಾದವೆಲ್ಲ ಭಸ್ಮವಹುದು. ಅನ್ನ ಮೊದಲಾದ ಮಿಕ್ಕಆಹಾರ ಜೀರ್ಣವಾಗುವದೆಂದು ಹೇಳಲೇತಕ್ಕೆ.

(ಬಡಬಾನಲಚೂರ್ಣ.)

ಶ್ಲೋ ॥ ಸೈಂಧವಸಮೂಲಮಗಧಾಶ್ಚವ್ಯಾನಲನಾಗರಹರೀತಕ್ಯಾಃ। ಕ್ರಮವೃದ್ಧಮಗ್ನಿದೀಪ್ಯಂಕರೋತಿಬಡಬಾನಲಂಚೂರ್ಣಂ ॥

ಟೀ॥ಸೈಂಧವ, ಹಿಪ್ಪಲಿ, ಹಿಪ್ಪಲಿಮೂಲ, ಚವ್ಯ, ಚಿತ್ರಮೂಲ, ಶುಂಠಿ, ಅಳಲೇಕಾಯಿ, ಇವುಗಳನ್ನು ಏಕೋತ್ತರವೃದ್ಧಿಯಿಂದ ಹೆಚ್ಚಿಸಿಕೊಂಡು ಚೂರ್ಣ

ವಮಾಡಿ ಆಚೂರ್ಣವಂ ಬಿಸಿನೀರಿನಿಂದ ಕೊಡಲು ಸದ್ಯಃ ದೀಪನವುಂಟಾಗುವುದು.

(ಅಷ್ಟಚೂರ್ಣ.)

ಶ್ಲೋ ॥ ತ್ರಿಕಟುಕಮಜಮೋದಂ ಸೈಂಧವಂ ಜೀರಕೇದ್ವೇ । ಸಮಧರಣಧೃತಾನಾಮಷ್ಟಮೋ ಹಿಂಗುಭಾಗಃ ॥ ಪ್ರಥಮಕಬಳಭುಕ್ತಂ ಸರ್ಪಿಷಾ ಚೂರ್ಣಮೇತತ್ । ಜನಯತಿ ಜಠರಾಗ್ನಿಂ ವಾತಗುಲ್ಮಂ ನಿಹಂತಿ ॥

ಟೀ ॥ ಶುಂಠಿ, ಮೆಣಸು, ಹಿಪ್ಪಲಿ, ವಾದಕ್ಕಿ, ಸೈಂಧವ, ಜೀರಿಗೆ, ಕರಿಜೀರಿಗೆ, ಈಔಷಧಗಳು ಪ್ರತ್ಯೇಕ ಧರಣತೂಕ. (ಧರಣವೆಂದರೆ ಹಲದಲ್ಲಿ ಹತ್ತರೊಳಗೆ ಒಂದುಭಾಗ.) ಅದು ೧೬ ಹಣತೂಕ, ಅಷ್ಟಮೊಹಿಂಗು ಭಾಗವೆಂದರೆ ಯಾಮೇಳುಔಷಧಗಳ ಯೆಂಟರೊಳಗೆ ಒಂದುಭಾಗ, ಅದು ೧೪ ಹಣತೂಕ. ಈರೀತಿಯಲ್ಲಿ ಶುಂಠಿಮೊದಲಾದ ಔಷಧಗಳನ್ನು ಚೂರ್ಣಿಸಿ ಆಚೂರ್ಣವನ್ನು ಭೋಜನವಮಾಡುವಾಗ ಮೊದಲಕಬಳದಲ್ಲಿ ತುಪ್ಪಗೂಡಿಸಿ ಭುಜಿಸಲು ಜಾಠರಾಗ್ನಿ ವರ್ಧಿಸುವುದು. ವಾತಗುಲ್ಮಹರ.

(ಯೋಗರಾಜಚೂರ್ಣ.)

ಶ್ಲೋ ॥ ತ್ರಿಕಟುಕಮಜಮೋದಂ ಚಿತ್ರಕೋಹಿಂಗುಭಾರ್ಙೀ । ವಿಡಮಪಿ ಸಹ ಚವ್ಯೈಃ ಸೈಂಧವಂ ಯಾವಶೂಕಂ ॥ ಅಮೃತಮಿವ ಭಿಷಗ್ಭಿಃ ಪೂಜಿತೋ ಯೋಗರಾಜಃ । ಕಫಪವನನಿಹಂತಾ ಶೂಲಹಾ ದೀಪನಶ್ಚ ॥

ಟೀ ॥ ತ್ರಿಕಟುಕ, ವಾದಕ್ಕಿ, ಚಿತ್ರಮೂಲ, ಹಿಂಗು, ಗಂಟುಭಾರಂಗಿ, ಬಿಡಾಲವಣ, ಚವ್ಯ, ಸೈಂಧವ, ಯವಕ್ಷಾರ, ಯಿವುಗಳನ್ನು ಸಮಾಂಶವಾಗಿ ಚೂರ್ಣಿಸಿ, ಆಚೂರ್ಣವಂ ತುಪ್ಪದಿಂ ಸೇವಿಸಲು ಶ್ಲೇಷ್ಮವಾತಹರ, ದೀಪನವುಂಟಾಗುವುದು. ಅಮೃತಮರ್ಯಾದೋಪಾದಿಯಲ್ಲಿ ವೈದ್ಯರುಗಳಿಗೆ ಪೂಜ್ಯವಾದಕಾರಣ ಯೋಗರಾಜಚೂರ್ಣವೆಂದು ಪ್ರಸಿದ್ಧವಾಯಿತು.

(ತ್ರಿಲವಣಾದಿಚೂರ್ಣ.)

ಶ್ಲೋ ॥ ತ್ರಿಲವಣಪಶುಗಂಧಾ ಪಂಚಕೋಲಾಜಮೋದಂ । ಮರಿಚಮಿಸಿವಿಳಂಗಂ ಹಿಂಗುವೃಕ್ಷಾಮ್ಲಪಾಠಾ ॥ ಪ್ರಬುಧತರುವಿಶಾಲಾಕ್ಷಾರಯುಗ್ಮಂ ನಿಕುಂಭಂ । ಗಜಕಣವರಕುಂಭಂ ಜೀರಕೇದ್ವೇ ಶಟೀಚ ॥ ಜಲಧರಧನಸಾತುಂಬುರುಃ ಕೋಲಭಾರ್ಙೀ । ಮೃತಕುಪುಷಯವಾನೀ ತಾರಭೀವೇತಸಾಮ್ಲಂ ॥ ದೃಷದಿ ಸಕಲಮೇತಚ್ಚೂರ್ಣಿತಂ ಬೀಜಪೂರ । ಸ್ವರಸವ

ಗಸುಪಿಷ್ಟಂ ಭೋಜನೇ ವಾಪುರೇವಾ ॥ ಪ್ಲೀಹಮುದಿಮಜಲಾದ್ಯೈತ್ರಸ್ಸೈವಿಕಾರಂಹುಂ
ರಿದೋಷಾನ್ | ಹೃದಯಜಠರಪಾರ್ಶ್ವಸ್ಫಿಕ್ಕಟೀವಸ್ತಿಶೂಲಂ ॥ ಉ
ಪಲಮಪಿಪಚೇತ್ಕ್ವಾಥ್ಯಮೂಲಾನಿ ತಸ್ಮಿನ್ | ಸಘೃತಮಪಿಬಪಕ್ವಂ ಚೂ
ರ್ಣಿತೈಸ್ತೈರೇಖಿರನ್ಯೈಸ್ತ್ರಃ ॥

ಟೀ ॥ ಸೈಂಧವ, ಬಿಡಾಲವಣ, ಸೌವರ್ಚಲವಣ, ನಾರುಂಬೇಳೆ, ಹಿಪ್ಪಲಿ, ಹಿಪ್ಪಲಿಮೂಲ, ಚವ್ಯ, ಚಿತ್ರಮೂಲ, ಶುಂಠಿ, ವಾದಕ್ಕಿ, ಮೆಣಸು, ಸಬ್ಬಸಿಗೆ, ವಾಯುವಿಳಂಗ, ಹಿಂಸು, ಕುಣಸಿಚಕ್ಕೆ, ಅಗಿಲುಶುಂಠಿ, ದೇವದಾರು, ಹಾವುಮೆಕ್ಕೆಬೇರು, ಸದ್ಯಕ್ಷಾರ, ಯವಕ್ಷಾರ, ಕಟ್ಟವತ್ತಿಗೆಬೇರು, ಗಜಹಿಪ್ಪಲಿ, ತ್ರಿಫಲ, ತಿಗಚೆ, ಜೀರಿಗೆ, ಕರೀಜೀರಿಗೆ, ಕರ್ಪೂರದಶುಂಠಿ, ಕೊನ್ನಾರಿಗಡ್ಡೆ, ಗಜ್ಜುಗದತಿರುಳು, ಕೂಬರಚಕ್ಕೆ, ಯಲಬೇಕೊಕ್ಕು, ಗಂಟುಭಾರಂಗಿ, ನುಗ್ಗೇಚಕ್ಕೆ. ಖುರಾಸಾನಿ, ಕಿರಿಜೀರಿಗೆ, ವಾಟೆಹುರದಚಕ್ಕೆ, ಇವನ್ನೆಲ್ಲ ಸಮಾಂಶವಾಗಿ ಚೂರ್ಣಿಸಿ, ಲೋಟಮಾದಳರಸದಲ್ಲಿ ಮೂರು ಭಾವನೆ ಮೂರುಮರ್ದನೆಗಳನ್ನು ಮಾಡಿ, ಭೋಜನಕಾಲದಲ್ಲಾದರೂ ಭೋಜನಕ್ಕೆ ಮೊದಲೇಯಾದರೂ ನಾಲ್ಕು ವರಹತೂಕವನ್ನು ಬಿಸಿನೀರಿನಿಂದ ತೆಗದುಕೊಳ್ಳಲು ಸಕಲದೋಷಗಳನ್ನೂ, ಎದೆನೋವು, ಹೊಟ್ಟೆಶೂಲೆ, ಪಾರ್ಶ್ವಶೂಲೆ, ಪಾಕಾಳದಶೂಲೆ, ನಡುಶೂಲೆ, ವಸ್ತಿಶೂಲೆ, ಇವಷ್ಟನ್ನೂ ಪರಿಹರಿಸುವುದು. ಕಲ್ಲಿಂದರೂ ಜೀರ್ಣವಾಗುವುದು. ಈ ಔಷಧಗಳಲ್ಲಿ ಕೆಲವು ಮೂಲಿಕೆಗಳನ್ನು ಕಷಾಯವಮಾಡಿಕೊಂಡು ಕೆಲವು ಔಷಧಗಳು ಕಲ್ಕವಮಾಡಿ ತುಪ್ಪವನಟ್ಟು ಕೊಡಲು ಕ್ಷಯರೋಗ ಮೊದಲಾದ ಸಕಲವ್ಯಾಧಿಗಳೂ ಪರಿಹಾರವಾಗುವವು.

(ತಾಳೀಸಚೂರ್ಣ)

ಶ್ಲೋ ॥ ತಾಳೀಸಪತ್ರಮರಿಚಂ ನಾಗರಂ ಪಿಪ್ಪಲೀಕುಕಾ | ಯಥೋತ್ತರಂ ಭಾ
ಗವೃದ್ಧ್ಯಾ ತ್ವಗೇಲಾ ಚಾರ್ಧಭಾಗಿಕಂ ॥ ರುಚ್ಯಂ ದೀಪನಂ ಚೂರ್ಣಂ ಕಣಾ
ಷ್ಟಗುಣಶರ್ಕರಾ | ಶ್ವಾಸಕಾಸಾರುಚಿಚ್ಛರ್ದಿಪ್ಲೀಹಹೃತ್ಪಾರ್ಶ್ವ
ಶೂಲನುತ್ ॥ ಪಾಂಡುಜ್ವರಾತಿಸಾರಘ್ನಂ ಮೂಢವಾತಾನುಲೋಮನಂ ॥

ಟೀ ॥ ತಾಳೀಸಪತ್ರೆ, ಮೆಣಸು, ಶುಂಠಿ, ಹಿಪ್ಪಲಿ, ತವಕ್ಷೀರ, ಈ ೫ ಔಷಧಗಳನ್ನೂ ಏಕೋತ್ತರವೃದ್ಧಿಯಾಗಿ ಹೆಚ್ಚಿಸಿ, ಇವುಅರ್ಧಭಾಗ, ಲವಂಗತ್ವಕ್ಕು ಅ

ವರಹತೂಕ, ಏಲಕ್ಕಿ ೭½ ವರಹತೂಕವಂತಾಗಿ ಇಡಿದು ಚೂರ್ಣಿಸಿ ಹಿಪ್ಪಲಿಗೆ ರಾವಡಿಸಕ್ಕರೆ ಕೂಡಿಸಿ ಆಚೂರ್ಣವಂ ಸೇವಿಸಲು, ಶ್ವಾಸ, ಕಾಸ, ಅರೋಚಕ, ಛರ್ದಿ, ಪ್ಲೀಹ, ಹೃದಯಶೂಲೆ, ಪಾರ್ಶ್ವಶೂಲೆ, ಇವೆಲ್ಲವೂ ಶಮನವಹವು. ಪಾಂಡುಜ್ವರಾತಿಸಾರ ಮೂಢವಾತಂಗಳು ಪರಿಹಾರವಹವು.

(ಕಪಿತ್ಥಾಷ್ಟಕ.)

ಶ್ಲೋ॥ ಯವಾನೀಪಿಪ್ಪಲೀಮೂಲಚಾತುರ್ಜಾತಕನಾಗರೈಃ । ಮರೀಚಾಗ್ನಿಜಲಾಜಾಜೀಧಾನ್ಯಸೌವರ್ಚಲೈಸ್ಸಮೈಃ ॥ ವೃಕ್ಷಾಮ್ಲಧಾತಕೀಕೃಷ್ಣ ಬಿಲ್ವದಾಡಿಮದೀಪ್ಯಕೈಃ । ತ್ರಿಗುಣೈಷ್ಷಡ್ಗುಣಸಿತೈಃಕಪಿತ್ಥಾಷ್ಟಗುಣೈಃಕೃತಃ ॥ ಚೂರ್ಣೋಽತಿಸಾರಗ್ರಹಣೀಕ್ಷಯಗುಲ್ಮಗಳಾಮಯಾನ್ । ಕಾಸಶ್ವಾಸಾಗ್ನಿಸಾದಾರ್ಶಃಪೀನಸಾರೋಚಕಾನ್ಜಯೇತ್ ॥

ಟೀ॥ ಖುರಾಸಾನಿ, ಹಿಪ್ಪಲಿಮೂಲ, ಏಲಕ್ಕಿ, ಲವಂಗಚಕ್ಕೆ, ಲವಂಗಪತ್ರೆ, ನಾಗಕೇಸರ, ಶುಂಠಿ, ಮೆಣಸು, ಚಿತ್ರಮೂಲ, ಮುಡಿವಾಳ, ಜೀರಿಗೆ ಕೊತ್ತುಂಬರಿ, ಸೌವರ್ಚಲವಣ, ೧೩ ಔಷಧಗಳು ಪ್ರತ್ಯೇಕ ೧ ವರಹತೂಕ, ಹುಣಿಸೇಬೀಜದ ಮೇಲಣಹುರುಕು, ಧಾತಕೀಕುಸುಮ, ಹಿಪ್ಪಲಿ, ಬಿಲ್ಲವತ್ತಿನಕಾಯಿತಿರುಳು, ದಾಳಿಂಬದಸಿಪ್ಪೆ, ವಾದಕ್ಕಿ, ಈ ೬ ಔಷಧಗಳೂ ೩ ವರಹತೂಕ, ಶರ್ಕರೆ ೧೮ ವರಹತೂಕ, ಬೇಲದಹಣ್ಣಿನತಿರುಳು, ೧೮೦ ವರಹತೂಕ, ಈರೀತಿಯಲ್ಲಿ ಚೂರ್ಣಿಸಿ ಜೇನುತುಪ್ಪದಲ್ಲಿ ಸೇವಿಸಬೇಕೆಂದು ಸುಶ್ರುತವ್ಯಾಖ್ಯಾನದಲ್ಲಿ ಹೇಳಲ್ಪಟ್ಟಿರುತ್ತೆ. ಮತ್ತು ಕೆಲಬರಾಚಾರ್ಯರುಗಳು ಖುರಾಸಾನಿ ಮೊದಲಾದ ೧೩ ಔಷಧಗಳು ಪ್ರತ್ಯೇಕ ೧ ವರಹತೂಕ, ಹುಣಿಸೇಬೀಜದ ಹುರುಕುಮೊದಲಾದ ಈ ೬ ಔಷಧಗಳೂ ಪ್ರತ್ಯೇಕ ೭½ ವರಹತೂಕ, ಸಕ್ಕರೆ ೧೧೨, ಬೇಳದಹಣ್ಣಿನ ತಿರುಳು ೩೨೧, ಈರೀತಿಯಲ್ಲಿ ಚೂರ್ಣವಮಾಡಬೇಕೆಂದು ಹೇಳಿದರು. ಈಚೂರ್ಣವು ಅತಿಸಾರ, ಗ್ರಹಣಿ, ಕ್ಷಯ, ಗುಲ್ಮ, ಕಾಸ, ಶ್ವಾಸ, ಅಗ್ನಿಮಾಂದ್ಯ, ಮೂಲ, ಕಂಠರೋಗ, ಪೀನಸ, ಅರೋಚಕ; ಇವಷ್ಟನ್ನೂ ಜಯಿಸುವುದು.

(ದಾಡಿಮಾಷ್ಟಕ.)

ಶ್ಲೋ॥ ಕರ್ಷೋನ್ಮಿತಾತುಕಾಕ್ಷೀರೀಚಾತುರ್ಜಾತಂದ್ವಿಕಾರ್ಷಿಕಂ। ಯವಾದಿ ಧಾನ್ಯಕಾಜಾಜೀಗ್ರಂಥಿವ್ಯೋಷಫಲಾಂಶಕಂ ॥ ಫಲಾನಿದಾಡಿಮಾದಷ್ಟೌ

ಸಿತಾಯಾಷ್ಟೌ ಕರ್ಷೈಃ ಕೃತಃ । ಸೂಕ್ಷ್ಮೈಃ ಕಪಿತ್ಥಾಷ್ಟಕವಟ್ಟಾ ಶ್ಲೋಯಂಡಾ ಡಿಮಾಷ್ಟಕಃ ॥ ಭುಂಜ್ಯಾದಮುಂಗರುಣ್ಯಾರ್ತ ಏಭಿಸ್ತುಖಲಮೇವವಾ॥

ಟೀ॥ತವಕ್ಷೀರ ೩ ವರಹತೂಕ, ಯಾಲಕ್ಕಿ, ಲವಂಗಪತ್ರೆ, ನಾಗಕೇಸರ, ಈ ನಾಲ್ಕು ಪ್ರತ್ಯೇಕ ೩ ಹೊನ್ನುತೂಕ, ವಾದಕ್ಕಿ, ಕೊತ್ತುಂಬರಿ, ಜೀರಿಗೆ, ಹಿಪ್ಪಲಿಮೂಲ, ತ್ರಿಕಟುಕ, ಈ ಮೇಲು ಪ್ರತ್ಯೇಕ ೩ ಹೊನ್ನುಯಿಪ್ಪಣವಡ್ಡ ತೂಕ, ಒಣಗಿದ ದಾಳಿಂಬಿನ ಕಾಯಿಸಿಪ್ಪೆ ೮ ಹಲ, ಶರ್ಕರೆ ೮ ಹಲ, ಈರೀತಿಕೂಡಿಸಿ ದಿನಂಪ್ರತಿ ಪ್ರಾತಃಕಾಲದಲ್ಲಿ ಸೇವಿಸಲು ಸರ್ವಾತಿಸಾರಹರ. ಈಔಷಧಗಳಿಂದಲೇ ಮಜ್ಜಿಗೆಯಪಳಿದ್ಯವಮಾಡಿಸಬಹುದು.

(ಭುಕ್ತಾಂಜರೀವಟಿಕ.)

ಶ್ಲೋ ॥ ಪಟೂನಿಪಂಚದ್ವೌಕ್ಷಾರೌ ಮರೀಚಂಪಂಚಕೋಲಕಂ । ದೀಪ್ಯಕಂಹಿಂಗುಗುಳಿಕಾ ಬೀಜಪೂರರಸೈಃ ಕೃತಾ ॥ ಕೋಲದಾಡಿಮಕೋರ್ಮ್ಯೈರ್ವಾ ಪರಂದೀಪನಪಾಚನಂ । ಭುಕ್ತಾಂಜರೀತಿವಿಖ್ಯಾತಾ ಗುಳಿಕಾ ಭೋಜನೋತ್ತರಾ ॥

ಟೀ ॥ ಸೈಂಧವಲವಣ, ಬಿಡಾಲವಣ, ಕಾಚಲವಣ, ಸೌವರ್ಚಲವಣ, ಸಮುದ್ರಲವಣ, ಸದ್ಯಕ್ಷಾರ, ಯವಕ್ಷಾರ, ಮೆಣಸು, ಹಿಪ್ಪಲಿ, ಹಿಪ್ಪಲಿಮೂಲ, ಚವ್ಯ, ಚಿತ್ರಮೂಲ, ಶುಂಠಿ, ವಾದಕ್ಕಿ, ಹಿಂಗು. ಇವುಗಳನ್ನು ಸಮಾಂಶವಾಗಿ ಚೂರ್ಣಿಸಿ, ಕೋಟಮಾದಳದ ರಸದಲ್ಲಾದರೂ, ದಾಳಿಂಬದಹಣ್ಣಿನರಸದಲ್ಲಾದರೂ, ಯಲಚೀಸೊಪ್ಪಿನರಸದಲ್ಲಾದರೂ, ಅರೆದು ಮೂರು ಕಾರಿ ಕಾವನೆಕೊಟ್ಟು, ೮ ವರಹತೂಕದ ಲೆಕ್ಕದಮೇರೆ ವಟಕವಮಾಡಿ, ಭೋಜನದಮೇಲೆ ಒಂದುವಟಕವಂ ತೆಗೆದುಕೊಳ್ಳಲು ಉಂಡ ಆಹಾರ ಸೀರಾಗಿಕರೆಗಿ ಪಚನವಹುದು, ದೀಪನವಹುದು.

(ಇದೇಅರ್ಥದಲ್ಲಿ ಗ್ರಂಥಾಂತರ.)

ಶ್ಲೋ॥ ಪಂಚಕೋಲಪಟುಪಂಚಯವಾನಿ । ಕ್ಷಾರಯುಗ್ಮಮರಿಚಂಸರಾಮಠಂ ॥ ಬೀಜಪೂರರಸಭಾವಿತಮೇತ । ತ್ಪಾಚನಂದಹತಿದೀಪನಮಾಶು ॥ ಪಾತಾಳರಂಜಯುಗ್ಮಾನಿಶರಪುಂಖೀಪುನರ್ನವಾಃ । ಕೃಷ್ಣನಿಂಬಂ ಮಹಾನಿಂಬಂಬರ್ಬರಂಲಶುಂಪಚೇತ್ ॥ ಪೃಥಗ್ದಶಪಲಂಚೋತ್ಕಾಣೆಚ ತುರ್ಭಾಗಾವಶೇಷಿತೇ । ದಧ್ನಃಪಾತ್ರೀಂಪಟೋಃಪಂಚಪ್ರಸ್ಥಂದ್ವಿಪ್ರಸ್ಥಂಚ

ಉಷ್ಣೋದಕಂ ॥ ಪ್ರಕ್ಷಿಪ್ಯೋನ್ಮಥ್ಯಮಂಥೇನಪುನಶ್ಚಸುಪರಿಸ್ರುತೇ । ಪಥ್ಯಾ
ಶತದ್ವಯಂ ಪದ್ಯಾತ್ ತತ್ಪಂಖ್ಯಾತಾಂಶ್ಚ ನಾಗರಾತ್ ॥ ಘೃತಾತ್ತ್ರಿಪಲಾ
ಚ್ಚಕುಡುಬದ್ವಯಂಭೂಯಶ್ಚಸಾಧಯೇತ್ । ಸುಸಿದ್ಧೇಶೀತ್ಯತಾಂಯಾ
ತೇಯವಾನಿದ್ವಯದೀಪ್ಯಕಂ ॥ ಹಿಂಗುವ್ಯೋಷಯವಕ್ಷಾರಂಪಲಾಂಶಂ
ಸುವಿಚೂರ್ಣಿತಂ। ಸಮಾವಾಪ್ಯತತಃಖಾದೇದ್ಯಥಾವಹ್ನಿಯಥಾಬಲಂ॥
ಏಷಾಪಾತಾಭಯಾಹಂತ್ರಿಸರ್ವಂಚಗ್ರಹಣೀಗದಃ । ಅಜೀರ್ಣಮಾ
ಮಂವಿಷ್ಟಂಭಮತಿಸಾರಂಚಿರಂತನಂ ॥ ಗುಲ್ಮಶೂಲೋದರಾಷ್ಠೀಲಂದು
ರ್ನಾಮಾರುಚಿಪೀನಸಾನ್। ಶೋಫಪಾಂಡ್ವಾಮಯಾಶ್ವಾಸವಿಬಂಧಾ
ಧ್ಮಾನಗೌರವಂ ॥ ಕೋಷ್ಠವಾತಾಗ್ನಿಸದನಂಶೀಲತಾತುಯಮಪ್ಯಸೌ ॥

ಟೀ ॥ ಅಗಿಲುಶುಂಠಿ, ಹೊಂಗೆನಾರು, ತಪಸದನಾರು, ಚಿತ್ರಮೂಲ, ಮುಷ್ಟ
ಕೊಗ್ಗಿ, ಬೇವಿನತೊಗಟೆ, ಕೊಂಮೆಬೇರು, ಕರಿಬೇವು, ಹೆಮ್ಮರದತೊಗಟೆ,
ನಾರುಂಬೇಳೆ, ಬಿಳ್ಳುಳ್ಳಿ, ಇವುಗಳನ್ನು ಪ್ರತ್ಯೇಕ ೧೦ ತೂಲ ನಾಗಳನೀರಲ್ಲಿ
ಕಷಾಯವೆತ್ತಿ ಚತುರ್ಭಾಗಾವಶೇಷವಾಗಿ ೧ ಕೊಳಗನೀರುಳಿಯಕಾಯಿ
ಸಿ, ಆನೀರಿನಲ್ಲಿ ೧ ಕೊಳಗ ಮೊಸರನ್ನು ೨ ಬಳ್ಳ ಅಂಬಲ, ಅಂಬಲಮಾ
ಡುವಕ್ರಮ,—ಅದಕ್ಕೆ ಹಾಕುವ ಧಾನ್ಯದವಿವರ. ಭತ್ತ, ನವಣೆ, ಸಾಮೆ,
ಹಾರಗ, ಬರಗು, ಕಂಬು, ಹುರಳಿ, ಹೆಸರು, ಸಾಣಂಗಿ, ಈಬಗೆ ಜಿನಸು
ಬೀಸಿದಹಿಟ್ಟು ಸಮಾನವಾಗಿ ಪುನೀಹಾಕಿದ್ದ ಹುಳಿನೀರುಹುಯ್ದು ೧ ಸೈಂಧವ
ಚೂರ್ಣವಹಾಕಿ, ಕಡಗೋಲಿಂದ ಚನ್ನಾಗಿ ಕಡದು, ಮತ್ತೆ ಒಲೆಯಮೇ
ಲಿಟ್ಟು ೨೦೦ ಅಳಲೇಕಾಯಿ ಚೂರ್ಣವಹಾಕಿ, ಇದರತೂಕ ಶುಂಠೀಚೂ
ರ್ಣವಹಾಕಿ, ೨ ಮಾನ ಬೆಣ್ಣೆ, ೨ ಮಾನ ತುಪ್ಪವನ್ನು ಹುನಿಸಿ, ಕಾಯಿಸಿ
ಲೇಹ್ಯಪಾಕಬಂದಸಮಯದಲ್ಲಿ ಜೀರಿಗೆ, ಕರೀಜೀರಿಗೆ, ವಾದಕ್ಕೆ, ಹಿಂಗು,
ಶುಂಠಿ, ಮೆಣಸು, ಹಿಪ್ಪಲಿ, ಯವಕ್ಷಾರ, ಇವುಗಳನ್ನು ಪ್ರತ್ಯೇಕ ೪ ವರಹ
ತೂಕವ ಚೂರ್ಣಿಸಿಹಾಕಿ, ಚನ್ನಾಗಿ ಕೊಳಸಿ, ಇಳುಹಿಕೊಂಡು, ಶರೀರ
ಬಲವನ್ನು ಅಗ್ನಿಬಲವನ್ನು ನೋಡಿ; ಅದಕ್ಕೆ ಅನುಗುಣವಾಗಿ ಮಾತ್ರೆಯ
ರಿತು ದಿನಂಪ್ರತಿ ಸೇವಿಸಲು ಗ್ರಹಣಿ, ಅಜೀರ್ಣ, ಆಮ, ಹೊಟ್ಟೆಉಬ್ಬರ, ಬ
ಹುಕಾಲದಅತಿಸಾರ, ಗುಲ್ಮ, ಶೂಲೆ, ಮಹೋದರ, ಅಷ್ಠೀಲ, ಅರೋಚಕ,
ಪೀನಸ, ಕ್ಷಯ, ವಾತಪಾಂಡು, ಶ್ವಾಸ, ಗೌರವ, ಕೋಷ್ಠವಾತ, ಅಗ್ನಿ

ಮಾಂದ್ಯ, ಇವೆಲ್ಲವನ್ನೂ ಪರಿಹಾರವಹುವು. **********************

(ಹಿಂಗುಪಾಠಾಹರೀತಕಿ.)

ಶ್ಲೋ ॥ ಹಿಂಗುಪಾಠಾಯವಕ್ಷಾರಂ ಸೈಂಧವಂಚಪುನರ್ನವಂ । ಕಠರಂ ಜಾಜೀರಕೇಶುಂಠೀಮರೀಚಂಪಿಪ್ಪಲೀವಚಾ ॥ಅಜಾಮೋದಂ ಸಲವಣಂಪೃಥಕ್ ಕರ್ಷಂಸುಪೇಷಿತಂ । ಶುಂಠೀಪಂಚಪಲೈರ್ಯುಕ್ತಂಪಂಚಾಶದಭಯಾಯುತಂ ॥ ತಕ್ರಾಢಕಸಮಾಯುಕ್ತಂಆಮ್ಲಕಾಂಜಿಕಸಂಯುತಂ । ಪ್ರಸ್ಥಾರ್ಧಲವಣೈರ್ಯುಕ್ತಂನವಭಾಂಡೇತುಪಾಚಯೇತ್ ॥ ದರ್ವೀಪ್ರಲೇಪಂ ವಿಜ್ಞಾಯಶುದ್ಧಪಾತ್ರೇವಗಾಲಯೇತ್ । ಪ್ರಾತರುತ್ಥಾಯಪಥ್ಯಾನಾಂದ್ವ್ಯುಕ್ತ್ವಾಚಮಹಾಪಧಂ॥ ಗ್ರಹಣೀಂಪಾಂಡುರೋಗಂಚಮಂದಾಗ್ನಿಂಚಾಪ್ಯರೋಚಕಂ। ಗುಲ್ಮಮಷ್ಟವಿಧಂಚೈವನಾಶಯೇನ್ನಾತ್ರಸಂಶಯಃ॥

ಟೀ ॥ ಒಂದು ಕೊಳಗ ಮಜ್ಜಿಗೆಯನ್ನು ಒಂದು ಹೊಸ ಭಾಂಡದಲ್ಲಿಹನಿಸಿ, ಅದರಕೂಡೆ ಎರಡುಬಳ್ಳ ಆಂಬಿಲವಬೆರಸಿ ಎರಡುಮಾನ ಸೈಂಧವಲವಣದಹುಡಿಯಂಹಾಕಿ, ಪಾಕವಮಾಡುವಲ್ಲಿ ಅದಕ್ಕೆ ಹಾಕುವ ಕಲ್ಕದ್ರವ್ಯ:— ಹಿಂಗು, ಅಗಿಲುಶುಂಠಿ, ಯವಕ್ಷಾರ, ಸೈಂಧವ, ಕೊಮ್ಮಬೇರು, ಹೊಂಗೆನಾರು, ಕವಸದನಾರು, ಜೀರಿಗೆ, ಕರೀಜೀರಿಗೆ, ಕೊನ್ನಾರಿಗಡ್ಡೆ, ಮೆಣಸು, ಹಿಪ್ಪಲಿ, ಬಜೆ, ವಾದಕ್ಕೆ, ಇವಿಷ್ಟುಪ್ರತ್ಯೇಕ ೪ ವರಹತೂಕವಚೂರ್ಣಿಸಿಹಾಕಿ, ಶುಂಠಿಚೂರ್ಣ ೫ ಪಲಹಾಕಿ, ಶೇಕ್ಯಪಾಕದಲ್ಲಿಯಿಳುಹಿ, ಪ್ರಾತಃಕಾಲದಲ್ಲಿದೇಹಬಲ, ಅನ್ನಬಲಗಳನ್ನರಿತು ಸೇವಿಸಲು ಗ್ರಹಣಿ, ಪಾಂಡುರೋಗ, ಮಂದಾಗ್ನಿ, ಅರೋಚಕ, ಎಂಟುವಿಧಗುಲ್ಮ, ಇವುಗಳು ಪರಿಹಾರವಹವು.

(ಪೂತಿಕಾನಾಗರಘೃತ.)

ಶ್ಲೋ॥ ಕ್ವಾಥೇನಾಗರಪೂತಿಕವಲ್ಕಲಭವೇವ್ಯೋಷಾಗ್ನಿಪಾಠಾನಿಶಾ । ಕಾರ್ಜೀಗ್ರಂಥಿವಿಡಂಗಹಿಂಗ್ವತಿವಿಷಾಮೂರ್ವಾಬ್ದಸಿಂಧೂದ್ಭವೈಃ॥ ಚವ್ಯೈರ್ಧಾನ್ಯಕದೀಪ್ಯಜೀರಕವಚಾಯಷ್ಟೀಭಕೃಷ್ಣಾನ್ವಿತೈಃ। ಸಕ್ಷೀರಂವಿಪಚೇದ್ಘೃತಂಗ್ರಹಣಿಕಾಕಾಸಾರಗುಲ್ಮಾಪಹಂ ॥

ಟೀ॥ಶುಂಠಿ ೨ ಬಳ್ಳ, ಕವಸದನಾರು ೨ ಬಳ್ಳ, ಈ ಎರಡನ್ನು ನಾಗಳಸೇರಿನಲ್ಲಿ ಕಷಾಯವೆತ್ತಿ ಚಾತುರ್ಥಾಂಶಾವ ಶೇಷಿತವಾಗಿಕಾಯಿಸಿ ಉಳಿದ ೧ ಕೊಳಗದ ಕಷಾಯದಲ್ಲಿ ೧ ಬಳ್ಳ ಹಸುವಿನತುಪ್ಪ, ೧ ಬಳ್ಳ ಹಸುವಿನಹಾಲುಹನಿಸಿ, ಪಾಕವ

ಮಾಡುವಾಗ ಊದಕ್ಕೆ ಹಾಕುವ ಕಲ್ಕದ್ರವ್ಯ,—ಶುಂಠಿ, ಮೆಣಸು, ಹಿಪ್ಪಲಿ, ಅಳುಶುಂಠಿ, ಚಿತ್ರಮೂಲ, ಅರಿಸಿನ, ಗಂಟುಭಾರಂಗಿ, ಹಿಪ್ಪಲಿಮೂಲ, ವಾಯುವಿಳಂಗ, ಹಿಂಗು, ಅತಿಬಜೆ, ಯಷ್ಟಿಮಧುಕ, ಹಿಪ್ಪಲಿ, ಇವಿಷ್ಟನ್ನೂ ಪ್ರತ್ಯೇಕ ೨ ವರಹತೂಕ, ಕೊರಟಿಗೆಬೇರು, ಕೊನ್ನಾರಿಗಡ್ಡೆ, ಸೈಂಧವ, ಚವ್ಯ, ಧಾತಕೀಕುಸುಮ, ವಾದಕ್ಕಿ, ಜೀರಿಗೆ, ಬಜೆ, ಯಷ್ಟಿಮಧುಕ, ಹಿಪ್ಪಲಿ, ಇವು ಪ್ರತ್ಯೇಕ ೨ ವರಹತೂಕವನ್ನೂ ಚೂರ್ಣಿಸಿ ಹಾಕಿ ತುಪ್ಪದ ಹದದಲ್ಲಿಯಿಳುಹಿ, ಪ್ರಾತಃಕಾಲದಲ್ಲಿ ಮಾತ್ರೆಯನ್ನರಿತು ಸೇವಿಸಲು ಗ್ರಹಣಿ, ಅತಿಸಾರ, ಗುಲ್ಮ, ಮೊದಲಾದ ಸಕಲವ್ಯಾಧಿಗಳೂ ಪರಿಹಾರವಾಗುವವು.

(ಗ್ರಹಣ್ಯಾಂತಕಘೃತ.)

ಶ್ಲೋ ॥ ವ್ಯೋಷೋಗ್ರಾಗಾರಧೂಮಧಾತಕೀದ್ವಿರಜನೀಮೋಜಾಜಮೋದಾಭ
ಯಂ । ಪಾಠಾಬಿಲ್ವಕಣಪ್ರಿಯಾಸರಸಿಜಾಭಾರ್ಙೀಸಮಂಗಾನ್ವಿತೈಃ ॥
ತೈಲಂಲೋಧ್ರವಟಾಂಕುರಾಕ್ರಿಮಿಹರಾನಂತಾತಣಾಮೂಲಕೈಃ ।
ಶಾರ್ಙ್ಗೇರಿಸ್ವರಸೇನದಧ್ನಿವಿಪಚೇತ್ಸರ್ಪಿರ್ಗ್ರಹಣ್ಯಾಂತಕಂ ॥

ಟೀ ॥ ಶುಂಠಿ, ಮೆಣಸು, ಹಿಪ್ಪಲಿ, ಬಜೆ, ಹೆಮ್ಮರದಕೊಕ್ಕು, ಧಾತಕೀಕುಸುಮ, ಅರಿಸಿನ, ಮರದರಿಸಿನ, ಯಾಲವದಹುಗಿನು, ವಾದಕ್ಕಿ, ಅಳಲೇಕಾಯಿ, ಅಳುಶುಂಠಿ, ಬಿಲ್ಲವತ್ರದಕೊಕ್ಕು, ಅತಿಬಜೆ, ತಾವರೆಕೇಸರ, ಗಂಟುಭಾರಂಗಿ, ಮುಟ್ಟಿದರೆಮುನಿವ, ಚಿತ್ರಮೂಲ, ಕಲ್ಲನಾಗು, ಲೋಧ್ರ, ಆಲದಬೀಳಲು, ವಾಯುವಿಳಂಗ, ಕುರುಚಿನಬೇರು, ಹಿಪ್ಪಲಿಮೂಲ, ಇವುಗಳನ್ನು ಪ್ರತ್ಯೇಕ ೨ ವರಹತೂಕವಂ ಚೂರ್ಣಿಸಿ ಯಿರಿಸಿಕೊಂಡು, ಒಂದು ಹೊಸಭಾಣ್ಡದಲ್ಲಿ ೧ ಬಳ್ಳ ಪುಳ್ಳಂಪುರುಚೆಸೊಪ್ಪಿನರಸ, ೧ ಬಳ್ಳ ಮೊಸರು, ೧ ಬಳ್ಳ ಹಸುವಿನ ತುಪ್ಪ, ಇವುಗಳಂ ಹುಯ್ದು, ಪಾಕವಮಾಡುವಲ್ಲಿ ಆಚೂರ್ಣವಹಾಕಿ ಕಲೆಸಿ ಹದದಲ್ಲಿ ತುಪ್ಪವಇಟ್ಟುಕೊಂಡು ದಿನಂಪ್ರತಿ ಉದಯಕಾಲದಲ್ಲಿ ದೇಹಬಲವರಿತು ಕೊಡಲು ಗ್ರಹಣಿ ಕುಟ್ಟುಗೆಟ್ಟು ಹೋಗುವುದು.

(ಮುಸ್ತಾಭಾರ್ಙ್ಗೀಘೃತ.)

ಶ್ಲೋ ॥ ಮುಸ್ತಾಕಷಾಯಕಂಸೇಚ ಶಾರ್ಙ್ಗೇರೀಸ್ವರಸೇನಚ । ಕಲ್ಕೈರ್ಧಾ
ತಕೀಪುಷ್ಪವರಾಂಗಗದಚಂದನೈಃ । ಪಿಪ್ಪಲ್ಯತಿವಿಷಾಲೋಧ್ರಚವ್ಯಚಿತ್ರಕ
ವತ್ಸಕೈಃ । ದಾರ್ವೀಸುರದ್ರುಸಾರಾಂಬುಬಿಲ್ವೋತ್ಪಲಮಹೌಷಧೈಃ ॥

సర్పిర్గవ్యంపచేద్ధంత్రిగ్రహణీంకల్పవాఢికాం।వి-శోద్ధితమలీ సారంశ్లేష్మాణంరసశోణితం॥

టీ॥ ౧ కొళగదప్రమాణభద్రముస్తేయం నాగళనీరినల్లి కషాయవెత్తి ౧ దినదల్లి జాకుభాగావశేషితవాగి కాయిసిద కషాయ ౧ కొళగకెృ ౧ కొళగ పుళ్ళంపుగుచెసొప్పినరసకూడిసి, ౧౬ హల హసు వినతుప్పవహుయ్యు పాకవమాడువాగ హాకువ కల్కద్రవ్య,-ధాతకీ కుసుమ, లవంగ, ఉంగలకోష్ఠ, కిరిగంధ, పిప్పలి, అతిబజె, లోధ్ర, చవ్య, చిత్రమూల, కొడసిగినచక్కె, మరదరిసిన, తుప్పదేవదారు, అగిలుశుంఠి, ముడివాళ, బిల్లవత్తదతిరుళు, కన్నైదిలగడ్డె, శుంఠి, ఇవిష్టన్నూ ప్రత్యేక ౨ వరహతూకవ కల్కవమాడిహాకి, హదదల్లిఇళుపి, ప్రాతఃకాలదల్లి సేవిసలు దీపనవుంటాగువుడు. హొసతాదగ్రహణి హళేదాదగ్రహణి, రక్తాతిసార,ఇవెల్లవూ శమనవహువు, ఐదురాత్రిపాక.

(౫) హణీగజకేసరీతేల్య.)

శ్లో॥ కరంజయుగ్మఖట్వాంగపంచవృక్షపలాశకాః।క్రైడర్యమిహారిపలాః।గార్యోంమూలాజినంపృథక్ ॥ త్రింశత్పలమాశేషాన్ధాంపలసప్తకమానతః।కపిత్థతింత్రిణీలొధ్రిధాతక్యంకోలచిత్రకం॥ దాడిమాక్షీబకాంబష్ఠంరాలజంమూలవల్కలం। బలీంద్రవల్లీదుస్పర్శసమంగాశరపుంఖజం॥యత్తుదృక్మైఖరిణ్యాశ్చమూలంతద్వశ్చసాధయేత్। కాలశాకఝటావీరవృతుశార్జీరికాదళం॥ పూర్వపప్రమాణంతత్సర్వంపంచదోద్రోణేజలేక్షిపేత్। క్వాథేభాగావశిష్టంతుగుడంవింశత్పలాన్వితం॥ శుద్ధంపురాణమావాప్యపక్త్వాయాతేథసాంద్రతాం।లోధ్రాజమొదమూతాస్థివరాతేఝరబీజకం॥జాతీమధుప్రియంబిల్వపిశిసజ్జాగ్నివత్సకం।ఝారద్వితయపాఠాబ్దలాతూరోచకరాజికా॥ వయస్థారామఠం పంచలవణంధూర్తబీజకం। యఝాక్షిజీవకార్పాసఫలందాడిమపిశికాః ॥ విజయాతింత్రిణీబీజంచమర్తకర్షగన్వాయంపృథక్ । చాతుర్జాతకసింధూర్థకిప్రమిహామరిచంకణా ॥ వాల

ಸ್ವಾದ್ವಿಕಯಂಶುಂಠಿದೀಪ್ಯಂಕುಟಜವಲ್ಕಲಂ । ಜೀರಕೇಚಪೃಥಗ್ಜ್ಞಿ
ಷ್ಕ.ಕ್ರಿಯಾಮಾನಂಚಕಾಳಕಂ ॥ ಗಂಧಕಂಟಂಕಣಂಕಾಂತಂಪಚಯೊ
ಭಸ್ಮಾಭ್ರಹಿಂಗುಳಂ । ಪಂಚನಿಷ್ಕಪ್ರಮಾಣಂಸ್ಯಾದ್ದಶನಿಷ್ಕಮಷ್ಟಿ
ನಕಂ ॥ ಸಂಚೂರ್ಣ್ಯಾಲೊಡ್ಯಗೀಕೆಸ್ಸ್ಮಿಂಚತುರ್ವಿಂಶತ್ಪಲಂಮಧು ।
ಸಂಯೋಜ್ಯಾಲಿಹ್ಯಾನ್ನಿಷ್ಕಾರ್ಧಂಸಾಯಂಪ್ರಾತಸ್ತಥಾನಿಶಿ ॥ ಸಾ
ಮಂನಿರಾಮಂಶಬ್ದಾಢ್ಯಂಸಶ್ಲೇಷ್ಮಾಣಂಸಶೂಲಕಂ । ಸಶೋಣಿತಂಗುದ
ಭ್ರಂಶಂಸಂಯುಕ್ತಂಚಸಫೇನಕಂ ॥ ವಾತಿಕಂಪೈತ್ತಿಕಂಶ್ಲೈಷ್ಮಂದ್ವಾಂ
ದ್ವಿಕಂಸನ್ನಿಪಾತಕಂ । ಭಯಶೋಕಾಭಿಘಾತೋತ್ಥಂಕೃತ್ರಿಮಂಚ
ಪ್ರವಾಹಿಕಂ ॥ ಅತಿಸಾರಂಜಯತ್ಯಾಶುಕಾಸಶ್ವಾಸಂಚಕಾಮಿಲಂ ।
ಗ್ರಹಣೀರೋಗಹೃದ್ರೋಗದುರ್ನಾಮಾರೋಚಕಕ್ರಿಮೀನ್ ॥ ಹಿ
ಕ್ಕಾಂಛರ್ದಿಂಚಕಾರ್ಶ್ಯಂಚಸಪಾಂಡುಂವಾತಶೋಣಿತಂ । ಪೆರ್ಯ
ಸ್ತುಗ್ರಹಣೀರೋಗಗಜಪಂಚಾನನಸ್ಮೃತಃ ॥

ಟೀ ॥ ಹೊಂಗೆತೊಗಟೆ, ಕವಸದತೊಗಟೆ, ಹೆಮ್ಮರದತೊಗಟೆ, ಅತ್ತಿ ತೊಗಟೆ, ಆಲದತೊಗಟೆ, ಅರಳೀತೊಗಟೆ, ಮಾವಿನತೊಗಟೆ, ನೇರಲ ತೊಗಟೆ, ಮತ್ತುಗದತೊಗಟೆ, ಕೊಡಸೀಗನತೊಗಟೆ, ಆವರಿಕೆತೊಗಟೆ, ಹುಣಿಸೇತೊಗಟೆ, ಬಿಳೀಹೂಲಿಯತೊಗಟೆ, ಇವಷ್ಟೂ ಪ್ರತ್ಯೇಕ ೪ ಹಲ. ಬೇಲದತೊಗಟೆ, ಲೋಧ್ರದಚಕ್ಕೆ, ಧಾತಕೀಕುಸುಮ, ಅಂಕೋ ಲದಚಕ್ಕೆ, ಚಿತ್ರಮೂಲದಬೇರಿನತೊಗಟೆ, ದಾಳಿಂಬದಚಕ್ಕೆ, ನುಗ್ಗೆಚಕ್ಕೆ, ಅಂಬಟೆಚಕ್ಕೆ, ಯಾಲಚೀಚಕ್ಕೆ, ಕಳ್ಳಂಗಳಿಬೇರಿನತೊಗಟೆ, ಚಿಟಿಕೆಬೇರು, ಕುರಿಚೆಬೇರು, ಮುಟ್ಟಿದರೆಮುನಿವ, ಮುಳ್ಳುಕೊಗ್ಗಿಯ ಬೇರಿನತೊಗಟೆ, ಗಜ್ಜಿಗದ ಬೇರಿನತೊಗಟೆ, ಉತ್ತರೇಣಿಬೇರು, ಕೆಂಪಿನಉತ್ತರೇಣಿಬೇರು, ಇವಷ್ಟೂ ಪ್ರ ತ್ಯೇಕ ೩ ಹಲ, ಕರೀಬೇವಿನಸೊಪ್ಪು, ಕಿರಿನೆಲ್ಲೀಸಮೂಲ, ಶೀರುಮರದಚ ಕ್ಕೆ, ಪುಳ್ಳಂಪುರಚೆಸೊಪ್ಪು, ಇವುಪ್ರತ್ಯೇಕ ೩ ಹಲ, ಇವಷ್ಟೂ ೨೦ ಕೊಳಗನೀರಿನಲ್ಲಿ ಕಷಾಯವೆತ್ತಿ, ಏಳುದಿನಪಾಕವಮಾಡಿ, ೪ ಕೊಳ ಗ ನೀರುಳಿಯಕಾಯಿಸಿ, ಅದರಲ್ಲಿ ೨೦ ಹಲ ಹುಳೀಬೆಲ್ಲವ ಶೋಧಿಸಿಹಾಕಿ, ಮೃದ್ವಗ್ನಿಯಿಂದ ಪಾಕವಮಾಡಿ, ಹದಕ್ಕೆಬಂದ ಸಮಯವನೋಡಿಕೊಂ ಡು, ಹದದಲ್ಲಿಹಾಕುವ ಪ್ರತಿವಾಪದ್ರವ್ಯಂಗಳು. ಲೋಧ್ರದಚಕ್ಕೆ, ವಾದ

ಕ್ಕಿ, ಮಾವಿನಬೀಜ, ಲವಂಗ, ಕೊಳವಳಿಕೆಬೀಜ, ಜಾಕಾಯಿ, ಅತಿಬಜೆ, ಬಿಲ್ಲಪತ್ರದಚೆಕ್ಕು, ಸಜ್ಜರಸ, ಚಿತ್ರಮೂಲ, ಕೊಡಸೀಗನಕೊಕ್ಕು, ಸರ್ಜ್ಯಕ್ಷಾರ, ಯವಕ್ಷಾರ, ಅಗಿಲುಶುಂಠಿ, ಕೊನ್ನಾರಿಗಡ್ಡೆ, ಅರಗು, ಕರ್ಪೂರದಶುಂಠಿ, ಬಿಳೀಸಾಸುವೆ, ಅಳಲೇಕಾಯಿ, ಹಿಂಗು, ಐದುಬಗೆಉಪ್ಪು, ಉಮ್ಮತ್ತದಬೀಜ, ಬೇಲದಹೂಗಿನು, ಯಲಚೀಹೂಗಿನು, ಯಲವದಹೂಗಿನು, ಕಗ್ಗಲಿಹೂಗಿನು, ಹಿಪ್ಪಲಿಮೂಲ, ಚವ್ಯ, ಗಜ್ಜುಗದತಿರುಳು, ಹತ್ತೀಅರಳತಿರುಳು, ದಾಳಿಂಬದ ಚೆಕ್ಕು, ಭಂಗೀಹುಡಿ, ಹುಣಿಸೇಬೀಜದ ಕೊಕ್ಕು, ಇವಪ್ಟು ಪ್ರತ್ಯೇಕ ೭ ವರಹತೂಕ, ಯಾಲಕ್ಕಿ, ಲವಂಗಪತ್ರೆ, ಲವಂಗದಕೊಕ್ಕು, ನಾಗಕೇಸರ, ಸೈಂಧವ, ವಾಯುವಿಳಂಗ, ಮೆಣಸು, ಹಿಪ್ಪಲಿ, ಲಾಮಂಚ, ಮುಡಿವಾಳ ಶುಂಠಿ, ಓಮ, ಕೊಡಸೀಗನಚಕ್ಕೆ, ಜೀರಿಗೆ, ಇವಪ್ಟನ್ನು ಪ್ರತ್ಯೇಕ ೩ ವರಹತೂಕ, ತಾಳಕ, ಗಂಧಕ, ಬಿಳಿಗಾರ, ಕಾಂತಭಸ್ಮ, ಲೋಹಭಸ್ಮ, ಅಭ್ರಕಭಸ್ಮ, ಇಂಗಳೀಕ, ಇವಿಪ್ಟೂ ಪ್ರತ್ಯೇಕ ೫ ವರಹಾತೂಕ. ಅಪಿನಿ ೧೦ ವರಹಾತೂಕ. ಈನಾಲ್ಕುಬಗೆಯನ್ನು ಯಾತ್ರಿಮದಲ್ಲಿಯೇಚೂರ್ಣಿಸಿ, ಶೀರ್ಘ್ಯಪಾಕವಮಾಡಿಹಾಕಿ ಕೊಳಸಿ ಯಿಳಿಹಿಕೊಂಡು ಆರಿದಮೇಲೆ ೨೮ ಹಲ ಜೇನುತುಪ್ಪವನ್ನು, ಸಮರಸವಾಗಿ ಕಲಿಸಿ, ಪ್ರಾತಃಕಾಲ, ಸಂಧ್ಯಾಕಾಲ, ಮಧ್ಯಾಹ್ನ ಗಳಲ್ಲಿ ಕೊಡಲು ವಾತಗ್ರಹಣಿ, ಪಿತ್ತಗ್ರಹಣಿ, ಶ್ಲೇಷ್ಮಗ್ರಹಣಿ, ದ್ವಂದ್ವಜಗ್ರಹಣಿ, ಸನ್ನಿಪಾತಗ್ರಹಣಿ, ಭಯಗ್ರಹಣಿ, ಶೋಕಗ್ರಹಣಿ, ಅಭಿಘಾತದಿಂದವುಂಟಾದಗ್ರಹಣಿ, ಕೃತ್ರಿಮದಿಂದವುಂಟಾದಗ್ರಹಣಿ, ವಿಷೂಚಿ, ಅತಿಸಾರ, ಕಾಸ, ಶ್ವಾಸ, ಕಾಮಿಲೆ, ಹೃದ್ರೋಗ, ಕುಷ್ಠ, ಅರೋಚಕ, ಕ್ರಿಮಿ, ಬಿಕ್ಕಟ್ಟು, ಛರ್ದಿ, ಕ್ಷಯ, ವಾತಶೋಣಿತ, ಇವುಮೊದಲಾದ ಸಕಲರೋಗಗಳೂ ಪರಿಹಾರವಹುವು. ಇದುಸಿದ್ಧಪ್ರಯೋಗ.

(ಗ್ರಹಣೀಗಜಕೇಸರೀರಸ.)

ಶ್ಲೋ ॥ ರಸಂಗಂಧಂವಿಷಂವ್ಯೋಷಂಟಂಕಣಂಲೋಹಭಸ್ಮಕಂ। ಜಾತೀಫಲಂಧಾತಕೀಚವರಾಳಂಚಿತ್ರಮೂಲಕಂ। ಅಜಾಮೋದಮಫೀನಂಚ ತೀಕ್ಷ್ಣಚೂರ್ಣಮೃತಾಭ್ರಕಂ। ಮುಸ್ತಾರತ್ವಕ್ಕಷಾಯೇಣಮರ್ದಯೇದ್ಯಾಮಯುಗ್ಮಕಂ॥ ಮರೀಚಾಭಾಂವಟೀಂಖಾದೇದಗ್ನಿದೀಪ್ತಿಕರೀಂಪರಂ। ಅನುಪಾನವಿಶೇಷೇಣಗ್ರಹಣೀಂಚಚತುರ್ವಿಧಾಂ॥ಸರ್ವಾತಿಸಾ

ರಶಮನಂದೃಷ್ಟಮೇತತ್ಪ್ರಯೋಗತಃ॥ರಸೋಯಂನಾಮತಃ ಪ್ರೋಕ್ತೋಗ್ರ
ಹಣೀಗಜಕೇಸರೀ॥ಅತಿಸಾರಕ್ರಿಯಾಂಸರ್ವಾಂವಿತನೇದತ್ರಬುದ್ಧಿಮಾನ್।
ಉಪಾಚರೇದ್ಯಥಾವಸ್ಥಂ ವಮಿರೇಚನಲಂಘನೈಃ ॥ ಗ್ರಹಣೀಮಿಶ್ರಿತಂ
ದೋಷಮಜೀರ್ಣವದುಪಾಚರೇತ್ ।ಗ್ರಹಣೀದೋಷಿಭಿಃ ಪೇಯಂತಕ್ರಂದೀ
ಪ್ತ್ಯರ್ಥಾಮೃತಂ॥ತಸ್ಮಾತ್ತಕ್ರಂಸದಾಕಾಲಂ ಗ್ರಹಣೀರೋಗನಾಶನಂ॥

ಟೀ ॥ ರಸ, ಗಂಧಕ, ವತ್ಸನಾಭಿ, ಶುಂಠಿ, ಮೆಣಸು, ಹಿಪ್ಪಲಿ, ಬಿಳಿಗಾರ, ಲೋಹಭಸ್ಮ, ಜಾಕಾಯಿ, ಧಾತಕೀಕುಸುಮ, ಲವಂಗ, ಚಿತ್ರಮೂಲ, ವಾದಕ್ಕಿ, ಯಲೇಮದ್ದು, ಉಕ್ಕಿನಭಸ್ಮ, ಅಭ್ರಕಭಸ್ಮ, ಇವಿಷ್ಟನ್ನೂ ಸಮಾಂಶವಾಗಿ ಕೂಡಿಸಿ, ಖಲ್ವದಲ್ಲಿರಿಸಿ, ಉಮ್ಮತ್ತದಬೀಜದಕಷಾಯದಲ್ಲಾದರೂ ಜೀರಿಗೆಕಷಾಯದಿಂದಾದರೂ ಮೂರುಝಾವ ಲೇಸಾಗಿಮರ್ದಿಸಿ, ಮೆಣಸಿನಕೋರಗುಳಿಗೆಯಂಮಾಡಿ ನೆರಳಿನಲ್ಲಿ ಒಣಗಿಸಿ ಹಿಪ್ಪಲಿ, ಜೇನುತುಪ್ಪದಿಂದಕೊಡಲು ಅಗ್ನಿಪಾಟವವುಂಟಾಗುವದು. ಅನುಪಾನವಿಶೇಷದಿಂದ ನಾಲ್ಕುಪ್ರಕಾರವಾದ ಗ್ರಹಣಿಯನ್ನು ಪರಿಹರಿಸುವುದು. ಇದು ಗ್ರಹಣೀಗಜಕೇಸರಿ ಯನ್ನಿಸಿಕೊಳ್ಳುವದು. ಮಹಾದೃಷ್ಟಪ್ರಯೋಗ. ದೇವತೆಗಳಿಗೆ ಅಮೃತ ಹ್ಯಾಗೆ ಹಿತಕರವೋ ಹಾಗೆ ಗ್ರಹಣೀರೋಗದವರಿಗೆ ಯೀಗುಳಿಕೆ ಹಿತಕರ. ಅತಿಸಾರದಲ್ಲಿ ಯಾವ ಉಪಚರಣೆಯಂಮಾಡುವರೋ ಗ್ರಹಣಿಯಲ್ಲೂ ಆಯುಪಚರಣೆಯನ್ನೇಮಾಡಿಸುವುದು, ವಮನ, ವಿರೇಚನ, ಲಂಘನಗಳಿಂದ ಅಜೀರ್ಣದವರಿಗೆ ಹೇಗೆ ಚಿಕಿತ್ಸೆಯಂ ಮಾಡುವದು. ಗ್ರಹಣಿಯವರಿಗೂ ಮಜ್ಜಿಗೆ ಅಮೃತದಹಾಗೆ ಹಿತಕರ. ಆದಕಾರಣದಿಂದ ಮಜ್ಜಿಗೆಯಿಂದಲೇ ಪಥ್ಯಪಾನಗಳಂಮಾಡಿಸುವುದು.

(ಗ್ರಹಣಿಯಲ್ಲಿ ಪಥ್ಯ.)

ಶ್ಲೋ ॥ಪಟೋಲಕುಟಜಾಜಾಜಿ ಶಾರ್ಙ್ಗೇರೀಕದಳೀಫಲಂ । ಆಜ್ಯಂದಧಿ
ಸಗಾಂಗೇರಿತೈಲತ್ರೈಡರ್ಯವಾಸ್ತುಕಂ ॥ ನಿದ್ರಾಕಳಿಂಗಶಾಕಂಚಕಪಿತ್ಥಂ
ಕುವರೀರಸಂ । ಅತಿಸಾರೇಗ್ರಹಿಣ್ಯಾಂಚರಂಭಾಪುಷ್ಪಂಹಿತಂವಿದುಃ ॥

ಟೀ ॥ ಪಡವಲದಕಾಯಿ, ಕೊಡಶಿಗನಚಕ್ಕೆ, ಜೀರಿಗೆ, ಪುಳ್ಳಂಪುರಚಿ, ಬಾಳೇಕಾಯಿ, ಆಡಿನಮೊಸರು, ಕಳ್ಳಂಗಡಲೆ, ಯಣ್ಣೆ, ಕರಿಬೇವು, ಚಕೋತದಸೊಪ್ಪು ನಿದ್ರೆ, ಕಾಚೀಕಾಯಿ,ಬೇಲದಹಣ್ಣು, ತೊಗರಿಕಟ್ಟು, ಬಾಳೇಮೋತೆ, ಇವೆಲ್ಲವೂ ಅತಿಸಾರದಲ್ಲೂ ಗ್ರಹಣಿಯಲ್ಲೂ ಪಥ್ಯಗಳು.

(ಗ್ರಹಣಿಯಲ್ಲಿ ಅಪಥ್ಯ.)

ಶ್ಲೋ ॥ ತಿಲನಿಷ್ಪಾವಕೂಶ್ಮಾಂಡಕಾಕೋಟಕಮುಷ್ಟಿದಕೀ । ಅಲಾಬು
ಕಂ ವಾಪ್ಯೂಪಂಚಮಾಂಸಂಮದ್ಯಂಗುಡಂವಿಮಂ ॥ ಅಸ್ತಾಂಬುಪಾನ
ತಾಂಬೂಲಸ್ನಾನಜಾಗರಸಂಗಮಾಃ । ಗ್ರಹಣ್ಯಾಮಹಿಸಾಶಿಬರ್ಜ್ಯ
ಜಿವಾಮಂಗುರೂಣಿಚ ॥

ಟೀ ॥ ಎಳ್ಳು, ಅವರೆ, ಕುಂಬಳದಕಾಯಿ, ಮುಳ್ಳುಸವತೆಕಾಯಿ, ಬಸಳೆಸೊ
ಪ್ಪು. ಸೋರೇಕಾಯಿ, ಮೆಣಸು, ದೋಸೆ, ಮದ್ಯ, ಮಾಂಸಗಳು, ಬೆಲ್ಲ, ಶೀತ
ವಾದವಸ್ತುಗಳು, ಹುಳಿಯಾದದ್ರವ್ಯ, ಕಣ್ಣೀರುಪಾನ, ತಾಂಬೂಲ, ಸ್ನಾನ,
ಜಾಗರ, ಸ್ತ್ರೀಸಂಗ, ಹುಳೀವಸ್ತು, ಗುರುವಾದವಸ್ತು, ಇವಿಷ್ಟೂ ಅಪಥ್ಯಗಳು.

(ವಿಷೂಚಿಕಾಚಿಕಿತ್ಸೆ.)

ಶ್ಲೋ ॥ ನಿತ್ಯಾತ್ಯಶನಶೀಲಸ್ಯ ವಿರುದ್ಧಗುರುಭೋಜನಾತ್ । ಅಗ್ನಿಮಾ
ನ್ದ್ಯಪ್ರದಾಹಾರಾದ್ವಿಷೂಚೀಜಾಯತೇನೃಣಾಂ ॥

ಟೀ ॥ ನಿತ್ಯದಲ್ಲಿಯೂ ಅತ್ಯಾಹಾರವ ತೊಂಬಾತನಿಗೆ ವಿರುದ್ಧವಾದಗುರು
ಭೋಜನದಿಂದಲೂ, ಅಗ್ನಿಮಾಂದ್ಯವನ್ನುಂಟುಮಾಡುವ ಆಹಾರಗಳಿಂದಲೂ ವಿ
ಷೂಚಿಯುಂಟಾಗುವುದು.

ಶ್ಲೋ ॥ ವಿಷೂಚಿಜಾಯತೇದೋಷಃಕುಪಿತೈರ್ಮಾಗತಾದಭಿಃ । ಸೂ
ಚೀಭಿರಿವಗಾತ್ರಾಣಾಂವೇಧನಾತ್ಸ್ಯಾದ್ವಿಷೂಚಿಕಾ ॥

ಟೀ ॥ ಆಹಾರವೈಷಮ್ಯದಿಂದ ವಾತ ಪಿತ್ತ ಶ್ಲೇಷ್ಮದೋಷಂಗಳು ಪ್ರಕೋ
ಪಿಸಿ ವಿಷೂಚಿಯನ್ನುಂಟುಮಾಡುವವು. ಸೂಜಿಗಳಿಂದ ಚುಚ್ಚಿದಹಾಗೆ ಸ
ರ್ವಾಂಗದಲ್ಲೂ ವೇದನೆಯುಂಟಾಗುವ ಕಾರಣ ವಿಷೂಚಿಯೆಂದು ಹೆಸರಾಯಿತು.

ಶ್ಲೋ ॥ ವಿಷೂಚಿಕಾಚ್ಯಲಸಕಾಸಾಜೀರ್ಣಾಚವಿಲಂಬಿಕಾ । ರಸಶೇಷಾ
ಚಪಂಚೈವಂಭಿದ್ಯತೇಸಾವಿಷೂಚಿಕಾ ॥

ಟೀ ॥ ಆವಿಷೂಚಿ, ವಿಷೂಚಿಕೆಯೆಂದೂ, ಅಲಸಕವೆಂದೂ, ಅಜೀರ್ಣವೆಂ
ದೂ, ವಿಳಂಬಿಕೆಯೆಂದೂ, ರಸಶೇಷವೆಂದೂ, ಐದುತೆರನಾಗಿರುವುದು.

(ವಿಷೂಚಿಲಕ್ಷಣ.)

ಶ್ಲೋ ॥ ವಿಷೂಚಿಕಾಸ್ಯಾತ್ತ್ರಿವಿಧಾವಾತಪಿತ್ತಕಫಾತ್ಮಿಕಾ ॥

ಟೀ ॥ ವಿಷೂಚಿಕೆಯೆಂಬದು ವಾತಜನ್ಯ, ಪಿತ್ತಜನ್ಯ, ಶ್ಲೇಷ್ಮಜನ್ಯವೆಂದು ಮೂರು ತೆರನಾಗಿರುದು.

(ಅದರಲಕ್ಷಣ.)

ಶ್ಲೋ ॥ ಭ್ರಮಃಕಂಪಸ್ತಥಾಸ್ತಂಭಃಶೂಲಾನಾಹಾದ್ಯುಪದ್ರವಃ । ಮಾರುತಾತ್ಪಿತ್ತತಸ್ತೃಷ್ಣಾಜ್ವರಾಂತರ್ದಾಹಮೂರ್ಛನಾಃ ॥ ಅತಿಸಾರಪ್ರಲಾಪಶ್ಚಶ್ಲೇಷ್ಮಣಾಗಾತ್ರಗೌರವಂ । ಛರ್ದಿರ್ನಿಷ್ಠೀವನಂಭೂಯೋವಾಕ್ಸ್ತಂಭೋಜಡತಾಪಿಚ ॥

ಟೀ ॥ ವಾತದಿಂದುಂಟಾದ ವಿಷೂಚಿಗೆ ಭ್ರಮೆ, ನಡುಕು, ಹೊಟ್ಟೆಶೂಲೆ, ಮೈ ಬಿಗರು, ಹೊಟ್ಟೆಯುಬ್ಬರ, ಇವುಗಳೂ. ಮತ್ತೂ ಕೆಲವು ಉಪದ್ರವಂಗಳೂ ಉಂಟಾಗಿರುವು. ಪಿತ್ತದಿಂದುಂಟಾದ ವಿಷೂಚಿಯಲ್ಲಿ ಬಾಯಾರಿಕೆ, ಜ್ವರ, ಒಳತಾಪ, ಮೂರ್ಛೆ, ಹೊಟ್ಟೆ ನೆಗ್ಗಳವಾಗಿಹೋಗುವಣ, ಪ್ರಲಾಪವುಂಟಾಗಿರುವಣ, ಶ್ಲೇಷ್ಮದಿಂದುಂಟಾದ ವಿಷೂಚಿಯಲ್ಲಿ ಮೈಭಾರೈಸಿಕೊಂಡು ಓಕರಿಕೆಯುಂಟಾಗಿ, ಮತ್ತೆಮತ್ತೆ ಬಾಯಲ್ಲಿ ನೀರುಹೊರಡುತ್ತ ಮಾತನಾಡುವದಕ್ಕೆ ಸಾಮರ್ಥ್ಯವಿಲ್ಲದಿರುದು. ಮೈಯಲ್ಲಿ ಮಹಾಜಾಡ್ಯವುಂಟಾಗಿರುದು.

(ಶ್ಲೇಷ್ಮದಿಂದುಂಟಾದ ವಿಷೂಚಿಯಲ್ಲಿ.)

ಶ್ಲೋ ॥ ದ್ವಿಧೈವಾಲಸಕಸ್ಸಾರ್ಧಂದಂಡಕಾಲಸಕೇನಚ ॥

ಟೀ ॥ ಅಲಸಕವೆಂದೂ, ದಂಡಕಾಲಸಕವೆಂದೂ ಯೆರಡು ತೆರನಾಗಿರುದು.

ಶ್ಲೋ ॥ ವಿಷ್ಟಂಭಿನನಹೋರ್ಧ್ವಂನಾಧೋದುಷ್ಟಮನ್ನಂಪ್ರವರ್ತತೇ । ಆಮೀಭೂತಂಕರೋತ್ಯಂತರಲಸಂಜಡತಾವಹಂ ॥

ಟೀ ॥ ಹೊಟ್ಟೆಯುಬ್ಬರಿಸಿಕೊಂಡು ದುಷ್ಟವಾದಅನ್ನದಗಳು ಕೆಳಕೂ ಮೇಲಕ್ಕೂಹೋಗದೆ ಆಮರೂಪವಾಗಿ ಅತ್ಯಂತ ಜಡತ್ವವನ್ನೂ ಅತ್ಯಂತಅಲಸಿಕೆಯನ್ನೂ ಮಾಡುವದರಿಂದ ಅಲಸಕವೆನ್ನಿಸಿಕೊಂಡಿತು.

ಶ್ಲೋ ॥ ಮಂದಾಗ್ನೇರ್ದುರ್ಬಲಸ್ಯಾನ್ನಂಕಫಮಾರುತಪೀಡಿತಂ । ಅಲಸೀಭೂತಮತ್ಯರ್ಥಂಅಂತಶ್ಶಲ್ಯಮಿವಸ್ಥಿತಂ ॥ ಕರೋತಿಶೂಲಮಾನಾಹಂನಕುವಾಂತಿವಿರೇಚನಂ । ತೇನಾಂತರ್ದೂಷಿತಾದೋಷಾಸ್ಟಂಡದಂಡಾಕೃತಿಂತನುಂ ॥ ಸ್ತಂಭಯಂತಿಪ್ರಕುರ್ವಂತಿದಂಡಕಾಲಸಕಂತತಃ । ಕಾಲದಂಡಾಹತಇವತೇನಾಪಿಷ್ಟೋನಜೀವತಿ ॥

ಟೀ ॥ ಮಂದಾಗ್ನಿಯಾಗಿ ದುರ್ಬಲವಾಗಿರುವವನಿಗೆ ಕೊಂಡಅನ್ನ ವಾತಶ್ಲೇಷ್ಮಗಳಿಂದ ದುಷ್ಟವಾಗಿ, ಪೆಗ್ಗಳವಾಗಿ, ಆಲಸ್ಯವನ್ನುಂಟುಮಾಡಿ, ಒಳಗೆ ದಸಿಯನೇರಿಸಿದಂತೆ ಯಿದ್ದುಕೊಂಡು ಹೊಟ್ಟೆಯಲ್ಲಿ ಅತ್ಯಂತವೇದನೆಯುಬ್ಬರಂಗಳನ್ನು ಮಾಡುವುದು. ವಾಂತಿವಿರೇಚನಗಳು ಯಿಲ್ಲದೇನೇಯಿರುವುದು. ಆದ್ದರಿಂದ ಅದರೊಳಗೆ ದುಷ್ಟವಾದ ವಾತಪಿತ್ತಶ್ಲೇಷ್ಮಂಗಳು ಶರೀರವನ್ನು, ಹೋಡಿಬಿಟ್ಟ ಮರದಂತೆ, ಬಿರೆಯಿಸುವದರಿಂದ ದಂಡಕಾಲಸವನ್ನಿಸಿಕೊಂಬುದು. ದಂಡಕಾಲಸಕವೆಂಬ ವ್ಯಾಧಿಯುಂಟಾದ ಮನುಷ್ಯನು ಯಮದಂಡದಿಂ ಹೊಡಯಿಸಿಕೊಂಡಂತೆ ಮತ್ತೆಬದುಕುವದಿಲ್ಲ.

ಶ್ಲೋ ॥ ಆಮಂವಿದಗ್ಧಂವಿಷ್ಟಬ್ಧಮಿತ್ಯಜೀರ್ಣಂತ್ರಿಧೋದಿತಂ ॥

ಟೀ ॥ ಅಜೀರ್ಣವೆಂಬ ವಿಷೂಚಿ ಆಮವೆಂದೂ ವಿದಗ್ಧವೆಂದೂ ವಿಷ್ಟಬ್ಧವೆಂದೂ ಮೂರುತೆರನಾಗಿರುವುದು.

ಶ್ಲೋ ॥ ಆಮಂಸಿಕ್ತಾದಿರೂಪಿಣ್ಯಾರೇಚನಂಸಮುದಾಹೃತಂ । ಹೃದಿದಾಹೋವಿದಗ್ಧಂಸ್ಯಾದಾಧ್ಮಾನಂತುವಿದಗ್ಧಕಂ ॥

ಟೀ॥ ಅಸುಳಗುಳಾಗಿ ಹೊಟ್ಟೆಹೋಗುವದು ಆಮವೆನ್ನಿಸಿಕೊಂಬುದು. ಎದೆಯುರಿತವಾಗಿರುವದು ವಿದಗ್ಧವೆನ್ನಿಸಿಕೊಂಬುದು.

ಶ್ಲೋ ॥ ದಿನೇದಿನೇಯಾಪ್ರವಹೇತ್ತೈನಸಾಸ್ಯಾದ್ವಿಲಂಬಿಕಾ ॥

ಟೀ ॥ ದಿನದಿನದಲ್ಲಿಯೂ ಭೋದಹೊಟ್ಟೆಯಾಗಿಹೋಗುವದು ವಿಲಂಬಿಕೆಯೆನ್ನಿಸಿಕೊಂಬುದು.

ಶ್ಲೋ ॥ ಜೀರ್ಣಾಜೀರ್ಣಸ್ಯರೂಪಂತುರಸಶೇಷಮುದಾಹೃತಂ ॥

ಟೀ ॥ ಜೀರ್ಣವೂ, ಅಜೀರ್ಣವೂ ಆಗಿಯಿದ್ದದ್ದು ರಸಶೇಷವೆನ್ನಿಸಿಕೊಂಬುದು.

ಶ್ಲೋ॥ ಶ್ಯಾವದಂತನಖಕೋಷ್ಠಕಾಲುಕೋ। ದೂರಮಗ್ನನಯನೋಲ್ಪಚೇತನಃ॥ ಗ್ರಸ್ತಗಾತ್ರರಸನೋವಿಷೂಚಿಕಾ। ದೂಷಿತಃಖಲುನರೋನಜೀವತಿ॥

ಟೀ ॥ ವಿಷೂಚಿಯುಂಟಾಗಿದ್ದಮನುಷ್ಯನಿಗೆ ಹಲ್ಲುಗಳೂ, ನಖಗಳೂ, ಮುಂಗೈಗಳೂ, ಕಟವಾಯುಗಳೂ ನೀಲವರ್ಣವಾಗಿ, ಕಣ್ಣುಗಳು ಹಳಿಬಿದ್ದು, ಮೈಕೈಸಂದುಗಳು ಸಡಲವಾಗಿದ್ದರೆ ಆತನವಿಷೂಚಿ ಅಸಾಧ್ಯವೆಂದರಿವುದು.

ಶ್ಲೋ ॥ ಪ್ರಾಯಃಪ್ರಜ್ಞೋಪರೋಧೇನರೋಗಗ್ರಾಮಃಪ್ರಜಾಯತೇ । ತಸ್ಮಾಚ್ಛೀಘ್ರಂವಿಷೂಚ್ಯಾಂತುಕರ್ತವ್ಯಂಭೇಷಜಂಬುಧೈಃ ॥

ಟೀ ॥ ವಿಷೂಚಿಯುಂಟಾದವರಿಗೆ ಜ್ಞಾನತಪ್ಪಿ ಮರಣವುಂಟಾಗುವುದು. ಆಸಮಯದಲ್ಲಿ ಸಮಸ್ತರೋಗಂಗಳೂಬಂದು ಮುತ್ತಿಕೊಂಬುವು. ಆದಕಾರಣ ವಿಷೂಚಿಯಲ್ಲಿ ಜ್ಞಾನ ತಪ್ಪದಂತೆ ಶೀಘ್ರದಲ್ಲಿಯೇ ಚಿಕಿತ್ಸೆಯಂಮಾಡತಕ್ಕದ್ದು.

(ಮತಾಂತರದಲ್ಲಿ.)

ಶ್ಲೋ ॥ ಆಮೇತುಲಂಘನಂಕಾರ್ಯಂವಿದಗ್ಧೇಚೋದಕಂಪಿಬೇತ್ । ವಿಷ್ಟಬ್ಧೇವಮನಂಕುರ್ಯಾದ್ರಸಶೇಷೇದಿವಾಶಯಃ ॥

ಟೀ ॥ ಆಮವೆಂಬದರಲ್ಲಿ ಲಂಘನವಮಾಡಿಸುವುದು. ವಿದಗ್ಧವೆಂಬದರಲ್ಲಿ ಜಲಪಾನಮಾಡಿಸುವುದು. ವಿಷ್ಟಬ್ಧವೆಂಬವಿಷೂಚಿಯಲ್ಲಿ ವಮನವಮಾಡಿಸುವುದು. ರಸಶೇಷವೆಂಬ ಅಜೀರ್ಣದಲ್ಲಿ ದಿವಾನಿದ್ರೆಯಂಮಾಡಿಸುವುದು.

ಶ್ಲೋ ॥ ಪೀತ್ವಾಸೋಗ್ರಾಪಟುಪಲಂವಾರ್ಯುಷ್ಣಂಯೋಜಯೇತ್ತತಃ ॥

ಟೀ ॥ ವಿಷೂಚಿಯಲ್ಲಿ ಬಜೆಭಸ್ಮವನ್ನೂ ಸೈಂಧವಲವಣವನ್ನೂ ಕೂಡಿಸಿ ಬಿಸಿನೀರಿಂದ ೧ ಪಲಕ್ಕೆ ತಕ್ಕಷ್ಟುಕುಡಿಸಲು ವಿಷೂಚಿಯಂಪರಿಹರಿಸುವುದು.

(ವೈದ್ಯಾಮೃತದಲ್ಲಿ.)

ಶ್ಲೋ ॥ ಗಾಢಂಪ್ರಚ್ಛರ್ದನಂಪ್ರಾಕ್ಸಲವಣಸಲಿಲಂಭೃಂಗರಾಜೇನನಸ್ಯಂ। ಬಿಂಬಾಪತ್ರಾಂಭಸಾವಾತ್ರಿಕಟುಪಟುಯುತೇನಾಗ್ನಿನಾಪಾರ್ಷ್ಣಿದಾಹಃ ॥
ಕಲ್ಕಂಶುಂಠೀಕಣಾನಾಮಶಿಶಿರಸಲಿಲೈಃಪಿಯಮಗ್ನಿಪ್ರತಾಪ್ತೋ । ಉಂಗಾಂಘ್ರಿವ್ಯೋಷನಕ್ತಾಹ್ವಯಪಲರಜನೀಭ್ಯೋಂಜನಂಸ್ಯಾದ್ವಿಷೂಚ್ಯಾಂ ॥

ಟೀ ॥ ವಿಷೂಚಿಯಲ್ಲಿ ಮುಂಚಿತವಾಗಿ ಲವಣಗೂಡಿದ ನೀರಿಂದ ವಮನವಂಮಾಡಿಸುವುದು. ಆಮೇಲೆ ಗರುಗದಸೊಪ್ಪಿನರಸವಂ ಮೂಗಿಗೆಹಿಂಡಿ, ನಸ್ಯವಮಾಡಿಸುವುದು. ತ್ರಿಕಟುಕಸೈಂಧವಗಳಿಂದಲಾದರೂ ಕುಣಿಸೇಸೊಪ್ಪಿನ ರಸದಿಂದಲಾದರೂ ನಸ್ಯವಂಮಾಡಿಸುವುದು. ತಿರುವಾಯ ಹಿಮ್ಮಡಿಗಳಲ್ಲಿ ರತ್ತೆಯಂಹಾಕಿಸುವುದು. ಆಮೇಲೆ ಶುಂಠಿ ಹಿಪ್ಪಲಿಗಳನ್ನರದು ಕಲ್ಕವಂಮಾಡಿ ಬಿಸಿನೀರಿಂದ ಕುಡಿಯಿಸುವುದು. ಬೆಂಕಿಯಲ್ಲಿ ಮೈಕಾಸುವುದು, ಆಮೇಲೆ ನಿಂಬೆಕುಳಿಯಿಂದ ಕೋಟಮಾದಳದಬೀಜ, ತ್ರಿಕಟುಕ, ಹೊಂಗೆಬೀಜ, ಅರಿಸಿನ, ಇವಷ್ಟನ್ನೂ ಅಂಜನವಂಮಾಡಿ ಪ್ರಯೋಗಿಸುವುದು.

ಶ್ಲೋ ॥ ಮಾಕ್ಷಿಕವ್ಯೋಷಸಂಯುಕ್ತಂನಾರಿಕೇಳೋದಕಂಪಿಬೇತ್ । ಪಿಪಾಸಾಂಪರಿದಾಹಂಚವಿಷೂಚೀಂನಾಶಯೇತ್ಕ್ಷಣಾತ್ ॥

ಟೀ ॥ ಶುಂಠಿ, ಮೆಣಸು, ಹಿಪ್ಪಲಿಗಳ ಚೂರ್ಣವಮಾಡಿ ಎಳೆನೀರಿನಲ್ಲಿ ಕದಡಿ ಜೇನುತುಪ್ಪ ನೆರಸಿ ಆ ಮೆಳನೀರಂಕುಡಿಯುಸಲು ಬಾಯಾರಿಕೆ, ತಾಪ, ವಿಷೂಚಿ ಇವೆಲ್ಲವೂ ಶಮನವಹುವು.

(ಸಾಂಕರದಲ್ಲಿ.)

ಶ್ಲೋ ॥ ಸನಾಡಿಕಾಮೂಲಭವಂಚಕಲ್ಕಂ । ಪಿಬೇದ್ವಿಷೂಚ್ಯಾಂಮಥಿತೇನಸಾರ್ಧಂ ॥

ಟೀ ॥ ಅಡಿಕೆಪುಟ್ಟನಬೇರಂ ಮಜ್ಜಿಗೆಯಲ್ಲಿಅರದು ಕಲ್ಕವಮಾಡಿ ಕೊಡಿಸಲು ವಿಷೂಚಿಪರಿಹಾರವಹುದು.

ಶ್ಲೋ ॥ ಶುಂಠ್ಯಂಬುಪ್ರಪಿಬೇದ್ಯಸ್ತುಪ್ರಾತರುತ್ಥಾಯಮಾನವಃ । ತಸ್ಯರೋಗಾಃಪ್ರಶಾಮ್ಯಂತಿಸರ್ವೇಚಾಮಸಮುದ್ಭವಾಃ ॥

ಟೀ ॥ ಶುಂಠಿಕಷಾಯವನ್ನು ಪ್ರಾತಃಕಾಲದಲ್ಲಿ ದಿನಂಪ್ರತಿ ತೆಗದುಕೊಳ್ಳಲು ಆಮದಿಂದುಂಟಾದ ಸಕಲ ಉದರರೋಗ ಪರಿಹಾರವಹುದು.

ಶ್ಲೋ ॥ ಚಿಂಚಾಪರ್ಣಯೋಮೂರ್ಧ್ನಿ ಸತ್ತೈಲಮಿಷ್ಟಂ । ಭೃಂಗಾಗ್ನಿಲೇಪಃ ಪರಿತಸ್ಯಲೇಪಃ ॥

ಟೀ ॥ ಹುಣಿಸೇಸೊಪ್ಪಿನರಸವನ್ನೂ ಎಣ್ಣೆಯನ್ನೂ ನೆತ್ತಿಗೆ ಒತ್ತುವ, ಗರುಗದಬೇರಂ ಅಂಬಿಲದಲ್ಲಿ ಅರದು ನಾಭಿಗೆ ಲೇಪವಂಮಾಡಿಸುವಣವಾದರೆ ವಿಷೂಚಿಪರಿಹಾರವಹುದು.

(ಆತ್ರೇಯಸಂಹಿತೆಯಲ್ಲಿ.)

ಶ್ಲೋ॥ಚೂತಬೀಜಪಟುಬಿಲ್ವಧಾತಕೀ । ಜೀರಕೋಷಣಕಣಾಜಮೋದಕಂ॥ಕಾಲಸೇಯಸಹಿತಂನಿಷೇವಿತಂ।ನಾಶಯತ್ಯತಿಜವಾದ್ವಿಷೂಚಿಕಾಂ॥

ಟೀ ॥ ಮಾವಿನವಾಟೆಕಿರುಳು, ಸೈಂಧವ, ಬಿಲ್ಲಪತ್ರದಹೀಚು, ಧಾತಕೀಕುಸುಮ, ಜೀರಿಗೆ, ಮೆಣಸು, ಹಿಪ್ಪಲಿ, ವಾದಕ್ಕಿ, ಇವುಗಳಂ ಮಜ್ಜಿಗೆಯಲ್ಲರದು ಕಲ್ಕವಮಾಡಿಕೊಡಿಸಲು ವಿಷೂಚಿಪರಿಹಾರವಹುದು.

ಶ್ಲೋ ॥ ಅತಿಮಾತ್ರಂಪಿಷೂಚೀಚೇತ್ತತ್ರಂದಧಿಹಿಮಂಜಲಂ । ನಾರಿಕೇಳಾಂಬುಪೇಯಂವಾಪಾಣಿತಾಣಾಯದಾಪಯೇತ್ ॥

ಟೀ॥ಅತ್ಯಂತವಿಷೂಚಿಯುಂಟಾಗಿ, ಪ್ರಾಣಹೋಗುಂದಿ, ಬರುಬಳಲಿಕೆಯುಂಟಾದವರಿಗೆ ಮಜ್ಜಿಗೆಯನ್ನಾದರೂ, ಮೊಸರನ್ನಾದರೂ, ತಣ್ಣೀರನ್ನಾದರೂ, ಎಳನೀರನ್ನಾ

ದರೂ ಗಂಜಿಯಾದರೂ ಕುಡಿಯ ಕೊಡಿಸುವುದು. ಇಲ್ಲವಿದ್ದರೆ ಪ್ರಾಣನಿಲ್ಲಲಾರದು.

(ಕಂಠಾಗ್ರಿಂಕರದಲ್ಲಿ.)

ಶ್ಲೋ ॥ ಶಾಲೀಮೂಲಂತಂಡುಲಾಂಬುಪ್ರಪಿಷ್ಟಂ । ನಾಭೌಲಿಪ್ತಂಹಂತಿ ಸದ್ಯೋವಿಷೂಚೀಂ ॥

ಟೀ ॥ ವಾಲಿಮರದಬೇರನ್ನು ಅಕ್ಕಿಯ ಗಚ್ಚಿನಲ್ಲಿಅರದು ನಾಭಿಗೆ ಲೇಪನವಂಗೈಯಲು ಸದ್ಯಃ ವಿಷೂಚಿಪರಿಹಾರವಹುದು.

ಶ್ಲೋ ॥ ನಾಗರೇಣಬಲಾಬಿಲ್ವಮೂಲಾಭ್ಯಾಂಸಾಧಿತಂಜಲಂ । ಪಿಬೇದ್ವಾ ಲಾಜಪೇಯಾಂವಾಕೃಷ್ಣಾದಾಹಭ್ರಮಾನ್ವಿತಃ ॥

ಟೀ ॥ ಶುಂಠಿ, ಬಿಲ್ಲಪತ್ರೆದಬೇರು, ಕಳ್ಳಂಗಡಲೆಬೇರು, ಯಿವಪ್ಪನ್ನು ಕಷಾಯ ವಿಕ್ಕಿ, ಆಕಷಾಯವನ್ನಾದರೂ ಅರಗಳ ಗಂಜಿಯನ್ನಾದರೂ ಕೊಡಿಸಲು ಬಾಯಾರಿಕೆ, ತಾಪ, ಭ್ರಮೆ, ಇವುಗಳುಪರಿಹಾರವಹುವು.

ಶ್ಲೋ ॥ ಮುಸ್ತಾಜಮೋದಪೂರೀಕಾವಚಾಶುಂಠ್ಯಗ್ನಿಧಾನ್ಯಕೈಃ । ಸವಾಳಕಶಠೀಬಿಲ್ವೈಃಕ್ವಾಥಸ್ತೃಟ್ಬಾಧದಾಹಜಿತ್ ॥

ಟೀ॥ ಕೊನ್ನಾರಿಗಡ್ಡೆ, ವಾದಕ್ಕಿ, ಕವಸದಚಕ್ಕೆ, ಬಜೆ, ಶುಂಠಿ, ಚಿತ್ರಮೂಲ, ಕೊತ್ತಂಬರಿ, ಮುಡಿವಾಳ, ಕರ್ಪೂರಶುಂಠಿ, ಬಿಲ್ಲಪತ್ರೆದಬೇರು, ಇವಪ್ಪನ್ನು ಕಷಾಯವಮಾಡಿ ಕೊಡಿಸಲು ದಾಹ ಬಾಯಾರಿಕೆ ಇವೆಲ್ಲವಂ ಪರಿಹರಿಸುವುದು.

ಇಂತು ವೈದ್ಯಸಾರಸಂಗ್ರಹದಲ್ಲಿ ಸಪ್ತಮಪ್ರಕರಣವು ಸಮಾಪ್ತವು.

---

## ಅಷ್ಟಮಪ್ರಕರಣಪ್ರಾರಂಭವು.

(ಅಶ್ಮರೀಚಿಕಿತ್ಸೆ.

ಶ್ಲೋ ॥ ಅಶ್ಮರೀಕುಚಕುಭೇದಾದೋಷೈಶ್ಶುಕ್ರಯುತಾಭವೇತ್ । ವಾಯುರ್ವಸ್ತಿಮುಖೇಗತ್ವಾಶುಕ್ಲಪಿತ್ತಕಫಾನ್ವಿತಂ ॥ ಮೂತ್ರಂಸಂಶೋಷ್ಯಜನಯೇತ್ ಘೋರಮಾಮಯಮಶ್ಮರೀ ॥

ಟೀ॥ ಕಲ್ಲಕಟ್ಟಿನವ್ಯಾಧಿಯು ವಾತಪಿತ್ತ ಶ್ಲೇಷ್ಮಗಳಿಂದಲೂ ದೋಷತ್ರಯದಿಂದ ಲೂಮಾಡಿ ನಾಲ್ಕುತೆರನಾಗಿಹುದು. ವಾಯುವು ನಾಭಿಯಕೆಳಗೆ ಬಂದು ವಿಟಪು ಹಳದಿಯಾದ ಶ್ಲೇಷ್ಮದೋಷಗಳೊಡನೆ ಕೂಡಿಯಿರುವ ಮೂತ್ರವಂ ಒಣಗಿಸಿ ಘೋರವಾದ ಕಲ್ಲಕಟ್ಟಿನವ್ಯಾಧಿಯನ್ನುಂಟುಮಾಡುವುದು.

(అదరలక్షణ.)

శ్లో॥ కదాచిపంవస్తిశోఫశ్చమేఢ్రపార్శ్వ కటివ్యథా । బస్త మూత్రసమోగంధోమూత్రంకృచ్ఛ్రేణనిస్సరేత్ ॥ జ్వరమూర్ఛారుచిగ్లానిఃస్ప్రతేమూత్రేక్షణంసుఖీ॥

టీ॥ ఆకల్లకట్టినవ్యాదియల్లి నాభియకెళగె బాకువుంటాగిరుదు. మేఢ్రదల్లూ, పార్శ్వదల్లూ, కొడెయల్లూ, నోవుంటాగువుదు. ఆడిన మూత్రదకాగె దుర్గంధవుంటాగిరుదు. మూత్రవు అతికష్టదింద బిడువను. జ్వరవుంటాగిరుదు. మూర్ఛె, అరోచక, బళలికె, ఇవుగళుంటాగిరువు. మూత్రబిట్ట ఒందుక్షణ సుఖవుంటాగిరుదు.

శ్లో॥ వాతజాజనయేత్కంపంబరుశోదంతఖాదనం । పిత్తజావస్తిదాహంచశ్లేష్మజాశ్శైత్యగౌరవం ॥ సర్వలింగంకుజనయేద్వాత పిత్తకఫాశ్మికా ॥

టీ॥ వాతదిందుంటాద కల్లకట్టు నడుకవనుంటుమాడువుదు. వెగ్గళవాగిఉల్లుకచ్చిసువుదు. పిత్తదిందుంటాదకల్లకట్టు నాభియకెళగె వురితవుంటుమాడువుదు. శ్లేష్మదిందుంటాద కల్లకట్టు దేహదల్లి శైత్యవన్నూ గౌరవన్నూ ఉంటుమాడువుదు. దోషత్రయదిందుంటాద కల్లుకట్టు హిందెహేళిద లక్షణగన్నెల్లవన్నుంటుమాడువుదు.

శ్లో॥ బాలానామశ్మరీసాధ్యాగ్రుణాకర్షణేసుఖీ। శుక్లధారణతోయానాంశుక్లజావర్ధతేశ్మరీ ॥

టీ॥ బాలకరిగెవుంటాద కల్లకట్టు సాధ్యవాదుదు. కల్లహిడిదు తెగెయిసలు సుఖవాగి గుణవాగుదు. ప్రాయదవరిగె శుక్లధారణెయువతరిందుంటాద కల్లకట్టు వృద్ధియాగువుదు.

శ్లో॥ ఇత్యష్టౌద్వాదశాన్యేప్యుమూత్రాఘాతస్తువింశతిః । అథ వామభిరుచ్యంతేశేషాద్వాదశరూపిణః ॥

టీ॥ హిందెహేళిదప్రకార మూత్రకృచ్ఛ్రవు ౮, అశ్మరీ ౮ కూడి ౧౬. ఇవల్లదె మత్తు ౧౨ ప్రకారవాద మూత్రాఘాతగళుంటు, అంతు యెల్లాకూడి మూత్రాఘాత ౨౦ తెర. మిక్క ౧౨ మూత్రాఘాతంగళహెసరు, అదెంతెనె.

ಶ್ಲೋ॥ ಮೂತ್ರೋತ್ಸಂಗಸ್ತಥಾಮೂತ್ರಗ್ರಂಥಿರ್ಮೂತ್ರಕ್ಷಯೋಪಿಚ । ಮೂತ್ರಾತೀತಂಮೂತ್ರಶುಕ್ಲಂಮೂತ್ರಕುಂಡಲಿಕಾತಥಾ ॥ ವಿಡ್ಘಾತೋ ಮೂತ್ರವಾತೋಥಮೂತ್ರಾಷ್ಠೀಲೋಷ್ಣವಾತಕಃ। ಮೂತ್ರವಸ್ತಿರ್ಮೂತ್ರಸಾದಇತಿನಾಮಭಿರೀರಿತಾಃ ॥

ಟೀ॥ ಮೂತ್ರೋತ್ಸಂಗ, ಮೂತ್ರಗ್ರಂಥಿ, ಮೂತ್ರಕ್ಷಯ, ಮೂತ್ರಾತೀತ, ಮೂತ್ರಶುಕ್ಲ, ಮೂತ್ರಕುಂಡಲಿಕೆ, ಮೂತ್ರವಿಡ್ಘಾತ, ಮೂತ್ರವಾತ, ಮೂತ್ರಾಷ್ಠೀಲ, ಉಷ್ಣವಾತ, ಮೂತ್ರವಸ್ತಿ, ಮೂತ್ರಸಾದಗಳೆಂದು ೧೨ ವಿಧಗಳು.

ಶ್ಲೋ। ಅಶ್ಮರೀಸಮರೋಗಾಸ್ಸ್ಯುಃಮೂತ್ರಕೃಛ್ರಾಸ್ತುಕೃತ್ಸ್ನಶಃ।ಮೂತ್ರಕೃಛ್ರಾಶ್ಮರೀಣಾಂಚಮೇಹಾನಾಂಚಚಿಕಿತ್ಸಿತಂ । ಸಮಾನಮಿತಿಶಾಸ್ತ್ರಜ್ಞಾಃಪಥ್ಯಂಚಾಪಿವದಂತಿಹಿ ॥

ಟೀ॥ ಕಲ್ಲಕಟ್ಟಿನವ್ಯಾಧಿಯೂ ಮೂತ್ರಕೃಛ್ರವ್ಯಾಧಿಯೂ ಸಮಾನವಾಗಿಹವು. ಆದಕಾರಣ, ಮೂತ್ರಕೃಛ್ರ, ಕಲ್ಲಕಟ್ಟು, ಪ್ರಮೇಹ, ಇವಷ್ಟಕ್ಕೂ ಒಂದೇಪ್ರಕಾರವಾದಚಿಕಿತ್ಸೆಯನ್ನೂ ಅದಕ್ಕೆ ತಕ್ಕ ಪಥ್ಯವನ್ನೂ ಮಾಡಿಸುವುದು.

ಶ್ಲೋ॥ ವಾತಸ್ಥಾನಾಶ್ರಯತ್ವಾತ್ಸ್ಯಾನ್ಮೂತ್ರಕೃಛ್ರೇಷುಸರ್ವಶಃ। ಸ್ನೇಹಪಾನಂಯಥಾಯೋಗ್ಯಂಸ್ವೇದಾಭ್ಯಂಗಾವಗಾಹನಂ॥ ಪ್ರಾಯೋವಿರೇಕಸ್ಸಸ್ನೇಹಃತ್ರಿವಿಧಂವಸ್ತಿಕರ್ಮಚ ॥

ಟೀ॥ ಮೂತ್ರಕೃಛ್ರವು ವಾತಸ್ಥಾನವನ್ನಾಶ್ರಯಿಸಿಯಿರುವಕಾರಣ ಯಥಾಯೋಗ್ಯವಾಗಿ ಸ್ನೇಹಪಾನ, ಅಭ್ಯಂಗನ, ಸೇಕ, ಸ್ನೇಹಾವಗಾಹನ, ವಿರೇಕ, ಮೂರುತೆರನಾದವಸ್ತಿಗಳು, ಇವನ್ನೆಲ್ಲ ಮಾಡಿಸುವುದು.

ಶ್ಲೋ॥ ಏಲೋಪಕುಲ್ಯಾಮಧುಕಾಶ್ಮಭೇದ। ಕೌಂತೀಶ್ವದಂಷ್ಟ್ರಾವೃಷಕೋರಪೂಗೈಃ॥ ಕ್ವಾಥಂಪಿಬೇದಶ್ಮಜತುಪ್ರಗಾಢಂ। ಕೃಛ್ರೇಸದಾಹೇಸರುಜೇವಿಬಂಧೇ॥

ಟೀ॥ ಯಾಲಕ್ಕಿ, ಹಿಪ್ಪಲಿ, ಎಷ್ಟಿಮಧುಕ, ಹಿಟ್ಟುಳಕನಬೇರು, ರೇಣುಕ, ನೆಗ್ಗಿಲಬೇರು, ಆಡಸೋಗೆ, ಔಡಲದಬೇರು, ಇವಿಷ್ಟನ್ನೂ ಹಾಕಿ ಅಷ್ಟಾವಶೇಷಿತವಾಗಿ ಕಷಾಯವ ಕಾಯಿಸಿ, ಶೋಧಿಸಿಕೊಂಡು ಕಲ್ಲಸಾರಹುಡಿಯವೆರಸಿಕುಡಿಯಕೊಡಲು ಮೂತ್ರಕೃಛ್ರ, ದಾಹ, ಶೂಲೆ, ಹೊಟ್ಟೆಯುಬ್ಬರ, ಇವೆಲ್ಲವೂ ಪರಿಹರವು.

(ತಂತ್ರಾಂತರದಲ್ಲಿ ಪಿತ್ತಕೃಛ್ರಕ್ಕೆ.)

ಶ್ಲೋ॥ ಶತಾವರೀಕಾಶಕುಶಶ್ವದಂಷ್ಟ್ರಾ। ವಿದಾರಿಶಾಲೀಕ್ಷುಕಶೇರುಕಾ

ಶ್ಲೋ॥ ಕ್ವಾಥಂ ಸುಶೀತಂ ಮಧುಶರ್ಕರಾಭ್ಯಾಂ ಯುಕ್ತಂ ಪಿಬೇತ್ಪಿತ್ತಕೃತೇ ಚ ಮೂತ್ರಕೃಚ್ಛ್ರೇ ॥

ಟೀ॥ ಆಷಾಢಿ, ಕಾಶೀಕಭೇ, ನೆಗ್ಗಿಲಬೇರು, ನೆಲಗುಂಬಳ, ನೆಲ್ಲೀಬೇರು, ಕಬ್ಬು, ಶೀಪಿಯಗಡ್ಡೆ, ಇವುಗಳನ್ನ ಅಷ್ಟಾವಶೇಷವಾಗಿ ಕಾಯಿಸಿ ಆ ಕಷಾಯವನ್ನು ಜೇನುತುಪ್ಪ ಶರ್ಕರೆ ಬೆರಸಿ ಕೊಡಲು ಪಿತ್ತದಿಂದುಂಟಾದ ಮೂತ್ರಕೃಚ್ಛ್ರಕ್ಕೆ ಪರಿಹಾರವಹುದು.

ಶ್ಲೋ॥ ಕದಲೀಕಂದಸಾರೇಣ ನಾರಿಕೇಳೋದಕೇನ ವಾ । ಮಸ್ತುಕಾಂಜಿರಸಕ್ಷೀರೈಸ್ತೈಲಂ ಸ್ಯಾತ್ಕೃಚ್ಛ್ರನಾಶನಂ ॥

ಟೀ॥ ಬಾಳೇಗಡ್ಡೆಯ ರಸದಿಂದಲಾದರೂ ಎಳನೀರಿಂದಲಾದರೂ, ಮೊಸರಿನಿಂದಲಾದರೂ, ಮಜ್ಜಿಗೆಯಿಂದಲಾದರೂ, ಹಾಲಿಂದಲಾದರೂ ಯಾಲಕ್ಕಿಯಂ ಅರೆದು ಕಲ್ಕವಮಾಡಿ ಕೊಡಿಸಲು ಸಕಲವಾದ ಮೂತ್ರಕೃಚ್ಛ್ರಗಳು ಪರಿಹಾರವಹುವು.

ಶ್ಲೋ॥ ಕಲ್ಕಮುರ್ವಾರುಬೀಜಂ ವಾಕ್ಷಮಾತ್ರಂ ಸಸೈಂಧವಂ । ಧಾನ್ಯಾಮ್ಲಯುಕ್ತಂ ಪೀತ್ವಾ ತು ಮೂತ್ರಕೃಚ್ಛ್ರಾತ್ಪ್ರಮುಚ್ಯತೇ ॥

ಟೀ॥ ಸೌತೇಬೀಜಗಳ ವರಹತೂಕವನ್ನ ಕಲ್ಕವಮಾಡಿ ಸೈಂಧವವೆರಸಿ ಕೊಡಲು ಮೂತ್ರಕೃಚ್ಛ್ರ ಪರಿಹಾರವಹುದು.

ಶ್ಲೋ॥ ಸಮೂಲಂ ವಾಸ್ತುಕೀಶಾಕಂ ಕ್ವಥಿತಂ ರಾಮಠಾನ್ವಿತಂ । ಶರ್ಕರಾಮಿಶ್ರಿದೋಷಂ ಮೂತ್ರಕೃಚ್ಛ್ರಾದಿನಾಶನಮ್ ॥

ಟೀ॥ ಚಿಲಕೀರೆಸೊಪ್ಪು ಸಮೂಲವಾಗಿ ಕಷಾಯವಮಾಡಿ ಇಂಗುವೆರಸಿ ಕೊಡಿಸಲು ಮೂತ್ರಕೃಚ್ಛ್ರ ಕಟ್ಟುಕಟ್ಟುಗಳು ಪರಿಹಾರವಾಗುವವು.

ಶ್ಲೋ॥ ಪೈತ್ತ್ಯೇಯುಂಜೀತಶಿಶಿರಸೇಕಲೇಪಾವಗಾಹನಂ । ತರುಣಂ ನಾರಿಕೇಳಸ್ಯ ಜಲಂ ಕತಕಸಂಯುತಂ ॥ ಶರ್ಕರಾಶೈಲಾಸಮಾಯುಕ್ತಂ ಮೂತ್ರಕೃಚ್ಛ್ರಹರಂ ಪರಂ ॥

ಟೀ॥ ಪಿತ್ತದಿಂದುಂಟಾದ ಮೂತ್ರಕೃಚ್ಛ್ರದಲ್ಲಿ ಶೈತ್ಯಜಲಸೇಕ, ಶೈತ್ಯವಾದ ಗಂಧಾನುಲೇಪ, ತಣ್ಣೀರಿನಸ್ನಾನ, ಇವೆಲ್ಲವೂ, ಹಿತವಹುವು. ತೆಂಗಿನ ಎಳನೀರಿನಲ್ಲಿ ಚಿಲ್ಲಬೀಜದಚೂರ್ಣವನ್ನೂ, ಶರ್ಕರೆ, ಯಾಲಕ್ಕಿ, ಇವುಗಳ ಚೂರ್ಣವನ್ನೂ ಹಾಕಿ ಕುಡಿಯ ಕೊಡೆ ಮೂತ್ರಕೃಚ್ಛ್ರ ಪರಿಹಾರವಹುದು.

ಶ್ಲೋ॥ ಹರಿದ್ರಾಚೂರ್ಣಮೇಕಂ ತು ಪಯಸಾ ಪ್ರಪಿಬೇನ್ನರಃ । ಮೂತ್ರಘಾತಂ ಮೂತ್ರದೋಷಂ ಕ್ಷಿಪ್ರಮೇವ ವಿನಾಶನಮ್ ॥

ಟೀ॥ ಅರಿಶಿನದ ಚೂರ್ಣವಂ ಹಸುವಿನ ಹಾಲಲ್ಲಿ ಕದಡಿ ಕುಡಿಯಕೊಡಲು ಮೂತ್ರಘಾತವನ್ನೂ ಸಕಲವಾದ ಮೂತ್ರದೋಷಗಳನ್ನೂ ಪರಿಹರಿಸುವುದು.

(ಚಿಕಿತ್ಸಾಮೃತವಲ್ಲಿ.)

ಶ್ಲೋ॥ ಬಲಾಪ್ರಸಾದಾಸ್ಥಿಕಕ್ಷೋಕವಂಕ। ಶತಾವರೀಗೋಕ್ಷುರಸಿದ್ಧಮಂಭಃ॥ ಹಿಂಗ್ವಾಜ್ಯತಂಕುಂಕ್ಯನಿಶೋಲ್ಬಣಾನಿ॥ ಕೃಛ್ರಾಣಿ ಕೃಛ್ರಾಣ್ಯಪಿ ಶರ್ಕರಾಂಚ॥

ಟೀ॥ ಜಿಲ್ಲದಬೀಜ, ಆವಿಕ್ಯಭಕ್ತ, ಆಷಾಢಿ, ನೆಗ್ಗಿಲಬೇರು, ಇವಿಷ್ಟನ್ನೂ ಕಷಾಯವ ಮಾಡಿ ಸ್ವಲ್ಪ ಹಿಂಗು ಸಹಿತ ಕುಡಿಯಕೊಡೆ ಸಕಲವಾತದಿಂ ಹುಟ್ಟಾದ ಮೂತ್ರಕೃಛ್ರ, ಕಲ್ಲುಕಟ್ಟು, ಇವೆಲ್ಲವೂ ಪರಿಹಾರವಹುದು.

ಶ್ಲೋ॥ ಗೋಕಂಟಗುಂಡ್ರಾವಸುಕಪತ್ತೂರಾಶ್ಮಭಿದಾಂರಸಃ॥ ಸಹಾಕ್ಷೀರಃ ಕಫೋತ್ಪನ್ನಕೃಛ್ರಾಶ್ಮನಿಸೂಷಪ್ರದಃ॥

ಟೀ॥ ನೆಗ್ಗಿಲು, ಕಂಬಿನಮೊಳೆ, ಸೂರ್ಯಭಕ್ತ, ಹೊನ್ನಗನ್ನೆ, ಹಿಟ್ಟುಳುಕ, ಇವುಗಳ ಸ್ವರಸವಂ ಜೇನುತುಪ್ಪ ವೆರಸಿ ಕುಡಿಯಕೊಡಲು ಶ್ಲೇಷ್ಮದಿಂ ಹುಟ್ಟಾದ ಸಕಲ ಮೂತ್ರಕೃಛ್ರ ಕಲ್ಲುಕಟ್ಟುಗಳು ಪರಿಹಾರವಹವು.

ಶ್ಲೋ॥ ಗೋಕ್ಷುರೋರ್ವಾರುಕತತಂ ಪಯಸಾ ಸಗುಳಂ ಪಿಬೇತ್॥

ಟೀ॥ ನೆಗ್ಗಿಲಬೇರು, ಸೌತೇಬೀಜ, ಜಿಲ್ಲದಬೀಜ, ಇವಿಷ್ಟನ್ನೂ ಹಾಲಲ್ಲಿ ಅರದು ಬೆಲ್ಲವೆರಸಿ ಕೊಡಿಸಲು ಮೂತ್ರಕೃಛ್ರಹರ.

ಶ್ಲೋ॥ ಹರೀತಕೀಗೋಕ್ಷುರರಾಜವೃಕ್ಷ। ಪಾಷಾಣಭಿದ್ಧನ್ವಯವಾಸಕಾನಾಂ॥ ಕ್ವಾಥಂ ಪಿಬೇದಶ್ಮಜಸುಪ್ರಗಾಢಂ। ಸಶರ್ಕರೇ ಸಾಶ್ಮರಿಮೂತ್ರಕೃಛ್ರೇ॥

ಟೀ॥ ಅಳಲೇಕಾಯಿ, ನೆಗ್ಗಿಲಬೇರು, ಕಕ್ಕೆಮರದ ಚಕ್ಕೆ, ಹಿಟ್ಟುಳುಕಸಬೇರು, ಕುರುಬಸಬೇರು, ಇವೆಲ್ಲವನ್ನೂ ಕಷಾಯವ ಮಾಡಿ ಕಲ್ಲನಾರು ಚೂರ್ಣವ ಹಾಕಿ ಕುಡಿಯಕೊಡಿಸಲು ಶರ್ಕರಾಮೇಹ, ಮೂತ್ರಕೃಛ್ರ, ಕಲ್ಲುಕಟ್ಟು, ಇವುಗಳು ಪರಿಹಾರವಹವು.

ಶ್ಲೋ॥ ತ್ರಿಫಲಾಕ್ವಾಥಸಂಯುಕ್ತಂ ಸೈಂಧವೇನ ತನೂಕೃತಂ। ತೈಲಮೇರಂಡಜಂ ಪೀತ್ವಾ ಜಯೇನ್ಮೂತ್ರಾಮಯಾನ್ನರಃ॥

ಟೀ॥ ತ್ರಿಫಲೆ ಕಷಾಯದಲ್ಲಿ ಸ್ವಲ್ಪ ಸೈಂಧವದ ಚೂರ್ಣವ ಹಾಕಿ ಹರಳೆಣ್ಣೆ ವೆರಸಿ ಕೊಡಿಸಲು ಮೂತ್ರರೋಗಹರ.

శ్లో ॥ ఏలాశ్మభేదనశిలాజితుపిప్పలీనాం । చూర్ణాని తండుల
జలేలులితానిపీత్వా ॥ యద్వాగుడేనసహితాన్యవలిహ్యమాన ।
ఆసన్నమృత్యురపిజీవతిమూత్రకృచ్ఛ్రీ ॥

టీ ॥ యాలక్కి, పిట్టుగుకనబేరు, కల్లనారు, హిప్పలి, ఇవుగళన్ను
అక్కియగచ్చినల్లి అరెదు కుడియువదు, అథవా బెల్లవెరసియాదరూ కుడి
సలు ఆసన్నవాదమృత్యువుళ్ళాతనిగాదరూ మూత్రకృచ్ఛ్రపరిహారవహుదు.

శ్లో ॥ నిర్గుండితారసంత్తైలంకర్పూరంచసుచూర్ణితం । ఆ
లోడ్యపాత్రపమేద్వర్తిం మేహనేవిన్యసేత్తతః ॥

టీ ॥ లక్కిసొప్పినరసదల్లి పచ్చకర్పూరదచూర్ణవహాకి స్వల్ప
ఎణ్ణెయంబిట్టు కారిసి సమరసవాగిమాడి హంజిబత్తిగాదరు సణ్ణబా
వడెయబత్తిగాదరు ఊడి మూత్రనాళదల్లి మెల్లగెసేరిసలు ఆవుత్త
రక్షణవే మూత్ర ఝల్లనెబిడువుదు.

(వస్త్యామయాంతకఘృత)

శ్లో ॥ బృహత్యంశుమతీద్వంద్వశారిబేక్షుకశేరుకం। కస్రోతకం
బిక్షురకముశీరంశిగ్రువాలుకం ॥ పాశాభివరణందాత్రీఫాభ
ల్లాతయష్టిఫలంకఫం। పృథక్త్రుఫలికంక్షుణ్ణసర్వతుల్యంచగో
క్షురం ॥ ద్రోణేపాంసాధయేత్సమ్యక్ పాదశిష్టపరిస్రుతం । ప్ర
క్షిప్యసర్పిషఃప్రస్థందత్వాక్షీరంవరీరసం ॥ధాత్రీబింబీరసం
చాపినారికేళోదకంతథా । కూశ్మాండోర్వారుకజలంస్నే
హద్విగుణితంపృథక్ ॥ ద్రవ్యైస్సుపిష్టైఃసంయుక్తమేకస్మిన్ద్వ
గ్నినాపచేత్ । పరూషకోర్పలకృటిఃధూకజివదారుభిః ॥త్రి
ఫలాపిప్పలీకాన్తిశృంగిబిశ్రైస్ససైంధవైః । హస్తిపిప్పల్యపామా
ర్గమంజిష్ఠాపద్మకేసరైః॥ ముస్తాకుస్తుంబరీలోధ్రసాశ్వగంధ
పునర్నవైః । స్వయంగుత్పేక్షురఫత్రైఃమోచాకందకశృంగిభిః॥
శిలాజిత్వర్ధభాగైస్త్రైఃసిద్ధంతత్సేపితంఘృతం। మూత్రకృచ్ఛ్రాణి
సర్వాణిశర్కరామశ్మరీమపి॥ పానవస్త్యాదిభిర్యుక్తంనాశయే
న్నాత్రసంశయః। వాతపిత్తకఫోత్థాన్సర్వాన్వస్తిగతాన్మ

Funding: IKS/Tattva Heritage and IKS-MoE. Digitization: eGangotri.



ದೀರ್ಘ ॥ ಪ್ರಮೇಹಾಂಸಕೃಚ್ಛ್ರಮಪವರ್ಣಯುಕ್ತಿಧುರ್ಯಂ । ಗುಲ್ಮಾಗ್ನಿ ಸಾದಗ್ರಹಣೀಮುದಾನಾಹಜರಾಮಯಂ ॥ ಕ್ಷಯಂ ಕ್ಷಯಕೃತಾನ್ ವ್ಯಾಧೀನ್ ರಕ್ತಪಿತ್ತಾಗ್ನಿಶೋಷದಾಹಾನ್ । ವಸ್ತ್ಯಾಮಯಾಂತಕ ಘೃತಂ ದೇವದೇವೇನ ಭಾಷಿತಂ ॥

ಟೀ ॥ ಗುಳ್ಳ, ನೆಲಗುಳ್ಳ, ಬಿಂದೆಲೆಹೊನ್ನೆ, ಹೂರಿಲೆಹೊನ್ನೆ, ಹಾಗಲಿ, ನೆಲಹಾಗಲಿ, ಕಬ್ಬು, ಕೇಪಿನಗಡ್ಡೆ, ಆದಿತ್ಯನಭಕ್ತ, ಕೊಳವಳಿಕೆ, ಲಾಮಂಚ, ನುಗ್ಗೆಸೊಪ್ಪು, ಮುಡಿವಾಳ, ನೆಲದಂಗು, ಮಟ್ಟಮಾಲಂಗಿಸೊಪ್ಪು, ದ್ರಾಕ್ಷಿಹಣ್ಣು, ಕೊನ್ನಾರಿಗಡ್ಡೆ, ಯಷ್ಟಿಮಧುಕ, ಚೆನ್ನಂಗಿಲು, ಇವಿಷ್ಟು ಪ್ರತ್ಯೇಕ ೩ ಹಾಗ ಕನ್ನು ಕುಟ್ಟಿ ಇವುಗಳ ಸಮ ನೆಗ್ಗಿಲಬೇರನ್ನು ಕುಟ್ಟಿ, ನಾಗಳನೀರಿನಲ್ಲಿ ಕಷಾಯವೆರೆತು ನಾಲ್ಕುಭಾಗ ಅವಶೇಷಿತವಾಗಿ ಕಾಯಿಸಿ, ಶೋಧಿಸಿಕೊಂಡು, ಆ ೧ ಕೊಳಗ ಕಷಾಯದಲ್ಲಿ ೧ ಬಳ್ಳ ತುಪ್ಪವನ್ನು ಹಾಕಿ, ಹಸುವಿನಹಾಲು, ಆಷಾಢೀರಸ, ನೆಲ್ಲೀಕಾಯಿ, ತೊಂಡೆಸೊಪ್ಪಿನರಸ, ಎಳನೀರು, ಕುಂಬಳಕಾಯರಸ, ಮುಳ್ಳುಸವತೇಕಾಯರಸ, ಇವಷ್ಟೂ ಪ್ರತ್ಯೇಕ ೨ ಬಳ್ಳ ಹುಯಿದು ಕಾಸುವಾಗ ಹಾಕುವ ಕಲ್ಕದ್ರವ್ಯ:— ಖರ್ಜೂರದಹಣ್ಣು, ನೈದಿಲಗಡ್ಡೆ, ಯಾಲಕ್ಕಿ, ಯಷ್ಟಿಮಧುಕ, ಶ್ರೀಗಂಧ, ಸರಳ, ದೇವದಾರು, ತ್ರಿಫಲೆ, ಹಿಪ್ಪಲಿ, ರೇಣುಕ, ಶುಂಠಿ, ಸೈಂಧವ, ಗಜಪಿಪ್ಪಲಿ, ಉತ್ತರಣೆಬೇರು, ಮಂಜಿಷ್ಠೆ, ತಾವರೆಕೇಸರ, ಭದ್ರಮುಸ್ತೆ, ಕೊತ್ತುಂಬರಿ, ಲೋಧ್ರ, ಹಿರೀವದ್ದಿನಬೇರು, ಕೊಮ್ಮೆಬೇರು, ನಸುಗುನ್ನಿಬೇರು, ಕೊಳವಳಿಕೆಬೀಜ, ಬಾಳೆಗಡ್ಡೆ, ಕರ್ಕಾಟಕಶೃಂಗಿ, ಕಲ್ಲನಾರು, ಇವಿಷ್ಟು ಪ್ರತ್ಯೇಕ ೨ ವರಹ ತೂಕ ಕಲ್ಕವಮಾಡಿ ಹಾಕಿ ಕಾಯಿಸಿ ಹದದಲ್ಲಿಳುಹಿಕೊಂಡು ಪ್ರಾತಃಕಾಲದಲ್ಲಿ ಸೇವಿಸಲು ಮೂತ್ರಕೃಚ್ಛ್ರ, ಪ್ರಮೇಹ, ಕಲ್ಲುಕಟ್ಟು, ವಸ್ತಿಗತವಾದ ಸಕಲರೋಗಂಗಳು, ಪುರಿತೆ, ಸಕಲಪ್ರಮೇಹ, ಗುಲ್ಮ, ಅಗ್ನಿಮಾಂದ್ಯ, ಗ್ರಹಣಿ, ಕ್ಷಯ, ಮೈದಿನೋವು, ಪಾರ್ಶ್ವಶೂಲೆ, ಇವೆಲ್ಲವೂ ಪರಿಹಾರವಾಗುವುವು. ಇದು ವಸ್ತ್ಯಾಮಯಾಂತಕಘೃತವೆಂದು ದೇವದೇವನಾದ ಪರಮೇಶ್ವರನಿಂದ ನಿರೂಪಿಸಲ್ಪಟ್ಟಿತು.

(ನಾರಿಕೇಳಘೃತ.)

ಶ್ಲೋ ॥ ನಾರಿಕೇಳಜಲಂ ಕ್ಷೀರಂ ಕೂಷ್ಮಾಂಡಂ ಚ ಶತಾವರೀಂ । ಇಕ್ಷುಕಾಂಡಂ ಚ ಮತ್ಸ್ಯಾಕ್ಷೀಂ ಕದಳೀಗೋಕ್ಷುರಾಮ್ರಕಾಃ ಪದ್ಮಕಪತ್ರಕಂ

ಸ್ಯಾತ್ತ್ರಪುಸಸ್ಯರಸಸ್ತಥಾ । ಉಲೂಖಲೇಕ್ಷೋದಯಿತ್ವಾ ಘೃತಪ್ರಸ್ಥಂ ವಿಪಾಚಯೇತ್ । ಕಲ್ಕಾಂಶ್ಚಾರ್ದ್ವಿತೀಯಾನ್ ಸರ್ವಾಂಶ್ಚಾಜಾಶ್ವಶ್ಮಭೇದಕಂ ॥ ಅಗ್ನಿಪಿಪ್ಪಲ್ಯಪಾಮಾರ್ಗತುಕಾಕ್ಷೀರೀತ್ರುಟೀರ್ನ್ತಥಾ । ತಿಲಕಾಂಚೀರಗುತ್ತಾಸ್ಯೃಕ್ಷೀಕದಳೀಕ್ಷುರಕಂತಥಾ ॥ ಯಷ್ಟಿಚೋರ್ವಾರುಬೀಜಂ ಚ ಸ್ವಯಂಗುಪ್ತಾಫಲಾನಿ ಚ । ಮಧೂರಿಕಾಶ್ವದಂಷ್ಟ್ರಾಚ ಬೀಜಂ ಕೂಶ್ಮಾಂಡಮೇವ ಚ ॥ ಕತಕಸ್ಯ ಚ ಬೀಜಂ ಚ ಮೃದ್ವೀಕಾ ಚ ಶತಾವರೀ । ಸರ್ವಮೇಕತ್ರ ನಿಯುಂಜ್ಯಾಥ ಶನೈರ್ಮೃದ್ವಗ್ನಿನಾ ಪಚೇತ್ ॥ ಏತತ್ಸರ್ಪಿಃ ಪೀಯಮಾನಂ ಸರ್ವತ್ರುಯವಿನಾಶನಂ । ಪ್ರಾತಃಪಾಣೀತಲಂ ಸ್ನಿಗ್ಧಂ ಚಾಯಮಿತ್ರಾತಕುಸ್ಥಿತಃ ॥ ಮೂತ್ರರೋಧಕೃತಾನ್ ರೋಗಾನ್ ಶರ್ಕರಾಮಶ್ಮರೀಮಪಿ । ಮೂತ್ರಾಘಾತಂ ಮೂತ್ರಕೃಚ್ಛ್ರಂ ಮೂತ್ರರೋಗಾಂಸ್ತಥೈವ ಚ ॥ ಮೂತ್ರಾಭಿಘಾತಂ ಮೇಹಾಂಶ್ಚ ಸೋಮರೋಗಂ ನಿಹಂತಿ ಚ । ಸರ್ವಾಂಶ್ಚ ವಸ್ತಿಗಾನ್ಹಂತಿ ಪುಮಾನ್ಸದ್ಯಸ್ಸುಖೀಭವೇತ್ ॥

ಟೀ॥ ಎಳನೀರು, ಹುಸುವಿನಹಾಲು, ಕಗ್ಗುಂಬಳದಕಾಯರಸ, ಆಷಾಢಿರಸ, ಕಬ್ಬಿನಹಾಲು, ಹೊನ್ನಗನ್ನಿರಸ, ಬಾಳೆಗಡ್ಡೆರಸ, ನೆಗ್ಗಿಲರಸ, ಅಮೃತಬಳ್ಳಿರಸ, ಒರಲೆತಾವರೆರಸ ಕೊಳವಳಿಕೆಸೊಪ್ಪಿನರಸ, ಇಷ್ಟನ್ನೂ ಪ್ರತ್ಯೇಕ ೧ ಬಳ್ಳವ ಹಾಕಿ ಅದರಲ್ಲಿ ೧ ಬಳ್ಳ ತುಪ್ಪವಹನಿಸಿ, ಹದದಲ್ಲಿ ಕಾಯಿಸುವಾಗ ಅದಕ್ಕೆ ಹಾಕುವ ಕಲ್ಕದ್ರವ್ಯ,— ಕಲ್ಲನಾರು, ಹಿಟ್ಟುಳುಕನಬೇರು, ಚಿತ್ರಮೂಲ, ಹಿಪ್ಪಲಿ, ಉತ್ತರಣೆಬೇರು, ತವಕ್ಷೀರ, ಯಾಲಕ್ಕಿ, ಗಂಧಿಕತಗರ, ಮೇಘ್ಯ, ರೇಣುಕ, ಹೊನ್ನಗನ್ನಿಬೇರು, ಬಾಳೆಗಡ್ಡೆ, ಕೊಳವಳಿಕೆಬೇರು, ಯಷ್ಟಿಮಧುಕ, ಸೌತೆಬೀಜ, ನಸುಗುನ್ನಿಬೀಜ, ಹಿಪ್ಪೆಹುವ್ವು, ನೆಗ್ಗಿಲಬೇರು, ಕಗ್ಗುಂಬಳದಕಾಯಿಬೀಜ, ಬಿಲ್ಲದಹರಳು, ದ್ರಾಕ್ಷೆಹಣ್ಣು, ಆಷಾಢಿ, ಇಷ್ಟೂ ಪ್ರತ್ಯೇಕ ೩ ವರಹತೂಕವ ಚೂರ್ಣಿಸಿ, ಆತುಪ್ಪದಲ್ಲಿ ಹಾಕಿ, ಮೃದ್ವಗ್ನಿಯಿಂದ ಪಾಕವಮಾಡಿ, ಹದದಲ್ಲಿ ಇಳುಹಿಕೊಂಡು ದಿನಂಪ್ರತಿ ಉದಯಕಾಲದಲ್ಲಿ ಸೇವಿಸಲು ಸಕಲ ಮೂತ್ರರೋಗ, ಪ್ರಮೇಹ, ಕಲ್ಲಕಟ್ಟು, ಸಕಲವಾದ ಉಷ್ಣವ್ಯಾಧಿಗಳು ಸಕಲವಾದ ವಸ್ತಿರೋಗಗಳು, ಸೋಮರೋಗ, ಇವು ಮುಂತಾದ ಸಕಲರೋಗಂಗಳೂ ಪರಿಹಾರವಹವು ತಪ್ಪದು.

(ಅಶ್ಮರೀಚಿಕಿತ್ಸಾ.)

ಶ್ಲೋ॥ ಅಶ್ಮರೀದಾರುಣೋವ್ಯಾಧಿರಂತಕಪ್ರತಿಮೋಮತಃ । ತರುಣೋಭೇಷಜೈಃ ಸಾಧ್ಯಃಪ್ರವೃದ್ಧೋಭೇದಮರ್ಹತಿ ॥

ಟೀ॥ ಅಶ್ಮರೀಯೆಂಬುದು ಮಹಾಭಯಂಕರವಾದ ವ್ಯಾಧಿ ಮೃತ್ಯುವಿಗೆ ಸರಿ ಸಮಾನವಾದದ್ದು. ಆ ಅಶ್ಮರೀಹೊಸದಾದರೆ ಔಷಧಕ್ಕೆ ಸಾಧ್ಯವಹುದು, ಹಳೇ ದಾದರೆ ಕುಯಿದಲ್ಲದೆ ಸಾಧ್ಯವಾಗದು.

ಶ್ಲೋ॥ನಿರ್ಗುಂಡ್ಯೈರಂಡಕೋರಂಡಗೋಕ್ಷುರದ್ವಿಪುನರ್ನವೈಃ।ಸಿಂಹ್ಯಾ ಬೃಹತೀಸುವರಣಾಕೃಷ್ಣಪಾಷಾಣಭೇದಕೈಃ॥ ಏತೈಃಪ್ರಸಾಧಿತೈಃ ಕ್ವಾಥಃಶ ರ್ಕರಾಮಶ್ಮರೀಮಪಿ।ಶೂಲಾಂಶ್ಚಪ್ರಕೃತಿಪ್ಲೀಹಜಠರಾಣಿಚನಾಶಯೇತ್॥

ಟೀ॥ ಲೊಕ್ಕಿಬೇರು, ಔಡಲದಬೇರು, ಕೊರಟಿಗೆಬೇರು, ನೆಗ್ಗಿಲು, ಕೊಮ್ಮೆ, ಅಡಿಕೆಪುಟ್ಟನಬೇರು, ನೆಲಗುಳ್ಳ, ಕೊನ್ನಾರಿಗಡ್ಡೆ, ನುಗ್ಗೇಬೇರು, ಮಟಮಾಲಂಗಿ ಬೇರು, ಪಿಪ್ಪಲಿ, ಪಿಟ್ಟುಳುಕನಬೇರು, ಇವಿಷ್ಟನ್ನು ಸಮಾಂಶವಾಗಿ ಕಷಾಯವಂ ಮಾಡಿ ತೆಗದುಕೊಳ್ಳಲು ಶರ್ಕರಾಮೇಹ, ಕಲ್ಲಕಟ್ಟು, ಶೂಲೆಕಲ್ಲು, ಪ್ರಪ್ರತಿ, ಪ್ಲೀಹ, ಮತ್ತೆಮಿಕ್ಕಾದ ಉದರರೋಗಂಗಳೆಲ್ಲವೂ ಪರಿಹಾರವಹುವು.

ಶ್ಲೋ॥ ಕೈಡರ್ಯಪತ್ರಜಂಕಲ್ಕಂಪಿಬೇದುಷ್ಣೇನವಾರಿಣಾ । ಸದ್ಯಃಶಮಯತಿರೋಗಂಶರ್ಕರಾಶೂಲಜಿದ್ಧ್ರುವಂ ॥

ಟೀ॥ ಕರಿಬೇವಿನಸೊಪ್ಪಂ ಅರದು, ಕಲ್ಕವಮಾಡಿ, ಬಿಸಿನೀರಿನಿಂದ ಕೊಡಿಸಲು ಆಕ್ಷಣದಲ್ಲಿಯೇ ನೋವು, ಕಲ್ಲಕಟ್ಟಿನಿಂಧ ವುಂಟಾದವ್ಯಾಧಿ ಪರಿಹಾರವಹುವು.

ಶ್ಲೋ॥ ಕ್ವಾಥಶ್ಚಶಿಗ್ರುಮೂಲೋತ್ಥಃಕದುಷ್ಣೋಶ್ಮರಿನಾಶನಃ ॥

ಟೀ॥ ನುಗ್ಗೆಬೇರಿನಕಷಾಯವನ್ನು ಆರಿಸಿ ಸ್ವಲ್ಪಬಿಸಿಯಾಗಿ ತೆಗದುಕೊಳ್ಳಲು ಅಶ್ಮರೀ ಪರಿಹಾರವಹುದು.

ಶ್ಲೋ॥ಸಿಂಧುವಾರವಿಶಾವಾರಿವಾರಯೇನ್ಮೇಢ್ರಶರ್ಕರಾಃ।ನಾರಿಕೇಳಾಂಬುನಾಪೀತಂತಯೋಃಕಲ್ಕಂಚತತ್ಸಮಂ॥

ಟೀ॥ ಲೊಕ್ಕಿಯಬೇರನ್ನು, ಅರಿಸಿನವನ್ನು, ಕಷಾಯವಮಾಡಿಕೊಡಿಸಿದರೂ, ಕಲ್ಕವಮಾಡಿಕೊಡಿಸಿದರೂ, ಕಲ್ಲಕಟ್ಟಿನವ್ಯಾಧಿಪರಿಹಾರವಹುದು.

ಶ್ಲೋ॥ ಕೃಷ್ಣನಿರ್ಗುಂಡಿಕಾಮೂಲಂನಾರಿಕೇಳಜಲೇನವಾ । ಪಿಷ್ಟ್ವಾಸಮ್ಯಕ್ಪಿಬೇತ್ಸದ್ಯಃಶರ್ಕರಾಶ್ಮರಿನಾಶನಂ ॥

టీ॥ కరీమొక్కెయబేరన్ను, ఎళనీరిందరదు కుడియకొడలు, శర్కరామేహం, కల్లుకట్టు, ఇవు పరిహారవహువు.

శ్లో॥ తిలాపామార్గకదళీపలాశయవసంభవః । క్షారః పిబేదవిమూత్రేణ శర్కరాశ్మరినాశనం ॥

టీ॥ యళ్ళుసెత్తెయక్షారవు ఉత్తరణెబూది బాళెబూది ముత్తుగద బూది, యవెయభస్మ ఇవిష్టన్నూ గోమూత్రదింద అరదు కుడియ కొడె కల్లుకట్టిన వ్యాధి పరిహారవహుదు.

(కపోతవంకాదిఘృత).

శ్లో॥ పాదాంశంవిపచేత్పృథక్త్రిఫలికాన్యంశోపజేసూక్ష్మశః।భిత్త్వాక్రాణకపోతవంకశరణక్రూష్మాణ్డగంధాబలాః।వాదావీదశమూలగోక్షురబిదార్యావాశ్మభిన్మోరటంమకాన్యక్షీరుశకాశదర్భసిఖరావీరద్రుమశిగ్రుద్వయం॥ పూరీకార్యగళౌకసిరువసుకోయాథిద్విపర్షాభుకం। కోగండంబఫరిశ్రుతేద్రిపచేద్ఘృతంఘృకంచాఢకం॥ దత్వాభిరుసపాఢకంద్విగుశీతంక్షీరైస్సుపిష్టైస్త్రిభా।క్ష్మైలావిశ్వవృణాళపుష్పవరణైఃకాంక్యైశ్మభిద్గోక్షురైః॥ యష్టీస్సైంధవమర్త్స్యద్ధ్రుబీసతుకాంశాలూకగోపీరిలైర్రుద్రాభీరుమధూలికేక్షురఫలాపౌవీరబీజాద్రిజైః। దుర్స్పర్శత్రికణ్టకృష్ణత్రికటుకాత్వావింశత్పలంప్రక్షిపేత్। తత్పృథాత్మరిసోమ్నశోగకశిలాంమూత్రామయానాశయేత్॥

టీ॥ సూర్యభక్తనబేరు, కిరుకసాశిబేరు, జిరీముద్దు, కళ్ళంగడలెబేరు, నెలదాళు, బిల్లవత్తదబేరు, నరువలబేరు, శివనీబేరు, పాదరీబేరు, జెమ్మరదచక్కె, కుళ్ళ, నెలకుళ్ళ,ఒందెలెహొన్నె,మూరెలెహొన్నె, దన్నెగ్గిలబేరు, నెగ్గిలబేరు, నెలగుంబళ, జిట్టుహుకనబేరు, కురటిగెబేరు,హొన్నగన్నె, కాశకుశదర్భె, ఔడలదబేరు, నుగ్గేబేరు, కాడనుగ్గెబేరు, తవసదబేరు, కరిగొరంటె, శిపిగంచె, కరిమొక్కెబేరు, అంబటెబేరు, అడికెపుట్టనబేరు, కోమ్మెబేరు, గోరటె, ఇవిష్టూ

ಪ್ರತ್ಯೇಕ ೩ ತೊಲಗಳನ್ನು ಕೊಳವ ಪ್ರತ್ಯೇಕ ಬಗಳಿನಲ್ಲಿಯಿಡಿದು, ಜಜ್ಜುಗಟ್ಟಿ ೧೬ ಕೊಳಗದನೀರಿನಲ್ಲಿ ಕಷಾಯವೆತ್ತಿ ನಾಲ್ಕನೇಕುಳಿಯುವಂತೆ ಕಷಾಯವ ಕಾಯಿಸಿ ಇಳಿಸಿ ಶೋಧಿಸಿಕೊಂಡು, ಅದರಲ್ಲಿ ೧ ಕೊಳಗ ಹಸುವಿನತುಪ್ಪವ ಹಾಕಿ, ಆಷಾಢೀಗಡ್ಡೆರಸ ೧ ಕೊಳಗ, ಹಸುವಿನಹಾಲು ೨ ಕೊಳಗ, ಇಷ್ಟನ್ನು ಕೂಡಿಸಿ ಹದಸೇ ಕಾಯುವಾಗ ಹಾಕುವ ಕಲ್ಕದ್ರವ್ಯ:- ಯಷ್ಟಿಮಧುಕ, ಯಾಲಕ್ಕಿ, ಶುಂಠಿ, ತಾವರೆಗೆಣಸು, ನಸುಗುನ್ನೇಬೀಜ, ಪಟೋಲಂಗೀಬೀಜ, ರೇಣುಕ, ಚಿಟ್ಟಿನಬೇರು, ನೆಗ್ಗಿಲುಬೇರು, ಚಿಪ್ಪಿಹುಲ್ಲು, ಜೊನ್ನಗನ್ನೆ, ಕವಕ್ಷೀರ, ನೈದಿಲಗಡ್ಡೆ, ಸೊಗಡೆ, ಮೆಳ್ಳು, ಪಾದಕ್ಕಿ, ಮುಟ್ಟಿದರೆಮುನಿಜ, ಸಬ್ಬಸೀಗೆ, ಕೊಳವಳಿಕೆಬೀಜ, ಮುತ್ತುಗದಬೀಜ, ಸೌತೇಬೀಜ, ಕಲ್ಲಸಾರು, ಉತ್ತರಣೆಬೇರು, ಹಿಪ್ಪಲಿ, ಹಿಪ್ಪಲಿಮೂಲ, ಚವ್ಯ, ಇವಿಷ್ಟನ್ನು ಪ್ರತ್ಯೇಕ ೧೦ ವರಹತೂಕವಹಾಕಿ ಕಾಯಿಸಿ ಹದದಲ್ಲಿ ಇಳಿಸಿಕೊಂಡು ಸೇವಿಸಲು ಮೂತ್ರಕೃಛ್ರ, ಕಲ್ಲಕಟ್ಟು. ಸೋಮರೋಗ, ಇವುಮುಂತಾದ ಸಕಲ ಮೂತ್ರರೋಗಂಗಳೂ ಪರಿಹಾರವಹುವು.

(ಮೂತ್ರಕೃಛ್ರಕ್ಕೆ ಅಪಥ್ಯ.)

ಶ್ಲೋ॥ ತಿಲಸರ್ಷಪಪಿಣ್ಯಾಕಶುಕ್ತತೈಲಂ ಬೃಹತೀದ್ವಯಂ । ಅತ್ಯುಷ್ಣಂ ಹಿಂಗುಲವಣಂ ಆತಪೋ ಮತ್ಸ್ಯಸೂರಣಂ ॥ ಕಪಿತ್ಥಂ ಬಹುದಾಹ್ಯನ್ನಂ ಕರೀರಾಮಿಶಿಬಾಪ್ರಕಂ । ಪುನರ್ನವಂಸ ತಾಂಬೂಲಂ ಕೃಚ್ಛ್ರಪಿಂಶತಿಸ್ತ್ರವಃ ॥

ಟೀ॥ ಎಳ್ಳು, ಸಾಸುವೆ, ಹಿಂಡಿ, ಎಣ್ಣೆ, ಬದನೆ, ಗುಳ್ಳ, ಅತ್ಯುಷ್ಣವಾದ ಆಹಾರ, ಹಿಂಗು, ಉಪ್ಪು, ಬಿಸಿಲು, ಮೀನು, ಸೂರಣ, ಬೇಲದಹಣ್ಣು, ವಿದಾಹವುಂಟುಮಾಡುವ ಅನ್ನ, ಬಿದಿರುಕಳಲೆ, ಸಬ್ಬಸೀಗೆ, ಹಸೀಶುಂಠಿ, ಕೊಮ್ಮೆಸೊಪ್ಪು, ವೀಳ್ಯ, ಯಿವು ೧೯, ೨೦ ವಿಧವಾದ ಮೂತ್ರಕೃಛ್ರಕ್ಕೆ ಅಪಥ್ಯ.

ಶ್ಲೋ॥ ಅತ್ಯಾಶನಂ ದಿವಾಸ್ವಪ್ನೋ ಮಾಕರ್ವಂ ಮೂಲಕಂ ದಧಿ । ಪಾಯಸಂ ಪನಸಂ ಮೋಚಮಾಜಂ ಮಾಂಸಂ ಚ ಮೈಥುನಂ । ವೇಗಸಂಧಾರಣಂ ಶಿಂಬಂ ಮೂತ್ರಕೃಚ್ಛ್ರೀ ವಿವರ್ಜಯೇತ್ ॥

ಟೀ॥ ಹೆಗ್ಗಳವಾದ ಆಹಾರ, ದಿವಾನಿದ್ರೆ, ಗರಗನಸೊಪ್ಪು, ಮೂಲಂಗಿ, ಮೊಸರು, ಪಾಯಸ, ಹಲಸಿನಹಣ್ಣು, ಬಾಳೆಹಣ್ಣು, ಆಡಿನಮಾಂಸ, ಸ್ತ್ರೀಸಂಗ, ಮಲಮೂತ್ರಗಳ ತಡೆಯುವುದು, ಅವರೆಕಾಯಿ, ಇವಿಷ್ಟೂ ಮೂತ್ರಕೃಛ್ರದಲ್ಲಿ ಅಪಥ್ಯಂಗಳು.

(ಮೂತ್ರಕೃಚ್ಛ್ರಕ್ಕೆ ಪಥ್ಯವರ್ಗ.)

ಶ್ಲೋ॥ ಸಟೋಲತ್ರಮತಾಸ್ತ್ಯಕ್ಷೀರಮಧುಬಿಂಬಫಲಂಗುಡಂ। ತ್ರಪುಸೋರ್ವಾರುಕೂಶ್ಮಾಂಡಫಲಂರಂಭಾಸುಮಂಸಿತಾ ॥ ಕುಮಾರೀಮುದ್ಗಜೀವಂತೀ ಧಾತ್ರೀಕೃಚ್ಛ್ರಗದೇಹಿತಂ ॥

ಟೀ॥ ಪಡವಲದಕಾಯಿ, ಮಜ್ಜಿಗೆ, ಹೊನ್ನಗನ್ನೆ, ಜೇನುತುಪ್ಪ, ತೊಂಡೇಕಾಯಿ, ಬೆಲ್ಲ, ಮೆಕ್ಕೇಕಾಯಿ, ಸೌತೇಕಾಯಿ, ಬೂದಿಗುಂಬಳಕಾಯಿ, ಬಾಳೇಮೋತೆ, ಶರ್ಕರೆ, ಲೋಳಸರ, ಹೆಸರು, ಸೀಹಾಲೇಸೊಪ್ಪು, ನೆಲ್ಲೀಕಾಯಿ, ಇವಿಷ್ಟು ಮೂತ್ರಕೃಚ್ಛ್ರದಲ್ಲಿ ಪಥ್ಯಗಳು.

(ಪ್ರಮೇಹಂಬರಿಕೆ ಸ್ಸೆ, ನಿಕ್ಯಸಾಧನಲ್ಲಿ.)

ಶ್ಲೋ ॥ ನವಾನ್ನಗುಡಮದ್ಯಾಂಬುದಧಿಧೂಮನಿಷೇವಣಾತ್। ದೂಷಿತಂಜನಯೇನ್ಮೇಹಂಶುಕ್ಲಮಜ್ಜಾವಸಾದಿಕಂ ॥

ಟೀ ॥ ಹೊಸಅಕ್ಕಿ ಅನ್ನ ಊಟಮಾಡುವದರಿಂದಲೂ, ಬೆಲ್ಲದಭಕ್ಷಣದಿಂದಲೂ, ಮದ್ಯದಿಂದಲೂ, ಬಹಳವಾದಜಲಪಾನದಿಂದಲೂ, ಮೊಸರುಭಕ್ಷಣದಿಂದಲೂ, ಬಹಳವಾಗಿ ಧೂಮಪಾನವಮಾಡುವದರಿಂದಲೂ, ದೂಷಿತವಾದಶುಕ್ಲ, ಮಜ್ಜ, ವಸಾದಿಗಳು ಪ್ರಮೇಹವನುಂಟುಮಾಡುವುದು.

ಶ್ಲೋ ॥ ಮೇಹೋವಿಂಶತಿರ್ದಿಕ್ಸಂಖ್ಯಾ ವಾತಪಿತ್ತಕಫೈಃಕ್ರಮಾತ್ ॥

ಟೀ ॥ ವಾತಪಿತ್ತಶ್ಲೇಷ್ಮಗಳಿಂದ ೪, ವಾತಗಳಿಂದ ೪, ಪಿತ್ತದಿಂದ ೬, ಶ್ಲೇಷ್ಮದಿಂದ ೧೦, ಇವೆಲ್ಲಕೂಡಿ ಪ್ರಮೇಹ ೨೦ ತೆರನಾಗಿಪುದು.

ಶ್ಲೋ ॥ ವಸಾಮಜ್ಜಗಜಕ್ಷೌದ್ರಸಂಜ್ಞಾವಾತೇನಪಿತ್ತತಃ। ರಕ್ತಹಾರಿದ್ರಮಂಜಿಷ್ಠಕ್ಷಾರನೀಲಾಖ್ಯಕಾಲಿಕಾಃ ॥ ಜಲೇಕ್ಷುಸಿಕತಾಪಿಷ್ಟಸುರಾಸಾಂದ್ರಪಿತಾಭಿಧಾಃ।ಶುಕ್ಲಲಾಲಾಶನೈ ರಾಖ್ಯಾಶ್ಶ್ಲೇಷ್ಮತೋಲತುಮೇಧ್ವಿಪಕ್॥

ಟೀ ॥ ವಾತದಿಂದ, ವಸಾಮೇಹ, ಮಜ್ಜಾಮೇಹ, ಗಜಮೇಹ, ಮಧುಮೇಹಗಳೆಂದು ೪ ತೆರ. ಪಿತ್ತದಿಂದ ರಕ್ತಮೇಹ, ಹರಿದ್ರಮೇಹ, ಮಾಂಜಿಷ್ಠಮೇಹ, ಕ್ಷಾರಮೇಹ, ನೀಲಮೇಹ, ಕಾಲಮೇಹಗಳೆಂದು ೬ ಮೇಹ. ಶ್ಲೇಷ್ಮದಿಂದ ಉದಕಮೇಹ, ಇಕ್ಷುಮೇಹ, ಸಿಕತಾಮೇಹ, ಪಿಷ್ಟಮೇಹ, ಸುರಾಮೇಹ, ಸಾಂದ್ರಮೇಹ, ಪೀತಮೇಹ, ಶುಕ್ಲಮೇಹ, ಲಾಲಾಮೇಹ, ಮಂದಮೇಹಗಳೆಂದು ೧೦ ಪ್ರಮೇಹ, ಇಂತು ಪ್ರಮೇಹಂಗಳು ೨೦.

ಶ್ಲೋ ॥ ಪ್ರಮೇಹಶ್ಲೇಷ್ಮಜಾಸ್ಸಾಧ್ಯಾಃ ಕಷ್ಟಸಾಧ್ಯಾಸ್ತುಪಿತ್ತಜಾಃ । ವಾತಜಾಯಾಪ್ಯಸಾಧ್ಯಾಸ್ಸ್ಯುಃ ಕೃಚ್ಛ್ರಸಾಧ್ಯಾಸ್ತ್ರಿದೋಷಜಾಃ ॥

ಟೀ॥ ಶ್ಲೇಷ್ಮದಿಂದುಂಟಾದ ೧೦ ಮೇಹಂಗಳೂ ಔಷಧಕ್ಕೆ ಸಾಧ್ಯವಾಗುವವು. ಪಿತ್ತದಿಂದುಂಟಾದ ೬ ಕಷ್ಟಸಾಧ್ಯ. ವಾತದಿಂದುಂಟಾದ ೪ ಮೇಹಂಗಳು ಯಾಪ್ಯಸಾಧ್ಯಂಗಳು. ತ್ರಿದೋಷದಿಂದುಂಟಾದಮೇಹಂಗಳು ಅತಿಕಷ್ಟಸಾಧ್ಯಂಗಳು.

ಶ್ಲೋ ॥ ತತ್ಪೂರ್ವರೂಪಂ ಸ್ವೇದೋಂಗೇ ಶೈಥಿಲ್ಯಂ ಕರಪಾದಯೋಃ । ವಿದಾಹೋ ಮೂತ್ರಬಾಹುಳ್ಯಂ ತೃಷ್ಣಾ ಕಂಠಸ್ಯ ಶೋಷಣಂ । ಮೂತ್ರೇ ಪಿಪೀಲಿಕಾಕ್ರಾಂತಿಃ ಶೂಲದಾಹೌ ವಮಿಃ ಕ್ರಮಾತ್ ॥

ಟೀ॥ ಮೇಹವ್ಯಾಧಿ ತೊಡಗುವದಕ್ಕೆ ಮೊದಲು ಆಗುವ ಪೂರ್ವಚಿಹ್ನೆ; ಮೈಯಲ್ಲಿ ಬೆವರು, ಕೈಕಾಲು ಅಲುಕುಹೋಗುವಣ, ದೇಹದಲ್ಲಿ ವಿದಾಹ, ಮೂತ್ರಹೇರಳವಾಗಿ ಅಡಿಗಡಿಗೆ ಬಿಡುವಣ, ಬಾಯಾರಿಕೆ ತೀವ್ರವಾಗಿ ವುಂಟಾಗುವಣ, ಕೊರಳು ಒಣಗುವಣ, ಕುಟಿಬಾಯಿ ಹತ್ತುವಣ, ಮೂತ್ರಿಸಿದ ತಾವಿನಲ್ಲಿ ಇರುವುಗಳು ಮುತ್ತುವಣ, ಮೈನೋವು, ಮೈಯುರಿತ, ಇವಿಷ್ಟೂ ಮುಂದಾಗಿ ಕಾಣಿಸುವವು.

(ನಿತ್ಯನಾಥನಲ್ಲಿ.)

ಶ್ಲೋ॥ ಉದಕೇಕ್ಷುಸ್ಸಾಂದ್ರಸುರಾಸಿಕತಾಶುಕ್ಲಶೀತಕಂ । ಪಿಷ್ಟಲಾಲಾತಿಮೂತ್ರಂ ಚ ಕ್ಷಾರಹಾರಿದ್ರರಕ್ತಕಂ ॥ ಮಾಂಜಿಷ್ಠನೀಲಕಾಳಂ ಚ ವಸಾಮಜ್ಜಾಮಧೂತ್ಥಿತಂ । ಅಸ್ಥಿಮೇಹಂ ವಿಂಶತೀಮಂ ಜಾತಂ ವರ್ಣೇನ ಲಕ್ಷಯೇತ್ ॥

ಟೀ॥ ಉದಕಮೇಹ, ಇಕ್ಷುಮೇಹ, ಸಾಂದ್ರಮೇಹ, ಸುರಾಮೇಹ, ಸಿಕತಾಮೇಹ, ಶುಕ್ರಮೇಹ, ಶೀತಮೇಹ, ಪಿಷ್ಟಮೇಹ, ಲಾಲಾಮೇಹ, ಅತಿಮೂತ್ರಮೇಹ, ಕ್ಷಾರಮೇಹ, ಹರಿದ್ರಾಮೇಹ, ರಕ್ತಮೇಹ, ಮಾಂಜಿಷ್ಠಮೇಹ, ನೀಲಮೇಹ, ಕಾಳಮೇಹ, ವಸಾಮೇಹ, ಮಜ್ಜಾಮೇಹ, ಮಧುಮೇಹ, ಅಸ್ಥಿಮೇಹಂಗಳೆಂದು ಮೇಹವ್ಯಾಧಿ ೨೦ ತೆರನಾಗಿಹುದು.

(ಅವುಗಳ ಸ್ವರೂಪ.)

ಶ್ಲೋ ॥ ಸ್ವಚ್ಛಂ ಬಹುಳಶೀತಂ ಚ ನಿರ್ಗಂಧಮುದಕೋಪಮಂ । ಜ್ಞೇಯಂ ಚೋದಕಮೇಹಂ ತತ್ಕಿಂಚಿದಾವಿಲಪಿಚ್ಛಿಲಂ ॥

ಟೀ॥ ಸ್ವಚ್ಛವಾಗಿ, ಬಹಳಶೀತವಾಗಿ, ಗಂಧರಹಿತವಾಗಿ, ನೀರಿನಹಾಗೆ ಸ್ವಲ್ಪ ಕದಡಿ ಕೊಂಡು, ಸ್ವಲ್ಪ ಸರಿಯಾಗಿ, ವಿಶೇಷವಾಗಿ, ಮೂತ್ರಬಿಡುವದನ್ನು

ಶ್ಲೋ ॥ ಮಧುಮಧುಕಮಾಗಧಮೃತಖರ್ಜೂರಶತಾವರೀಕಶೇರೂಣಾಂ।
ಸವಿದಾರೀಣಾಂಕಲ್ಕಃ ಪೀತೋನಾಮುನ್ಮಾದಮುಪಹಂತಿ ॥

ಟೀ ॥ ಯಷ್ಟಿಮಧುಕ, ಹಿಪ್ಪಲಿ, ಖರ್ಜೂರ, ಆಷಾಢಿಗೆಣಸು, ಕ್ಷೀರಗಡ್ಡೆನೆಲಗುಂಬಳಗೆಣಸು, ಇಷ್ಟನ್ನು ಸಮಾಂಶವಾಗಿ ನೀರಿಂದ ಅರದು ಕಲ್ಕವಮಾಡಿ, ತುಪ್ಪ ಜೇನುತುಪ್ಪಗಳ ಬೆರಸಿ ಕೊಡಿಸಲು ಉನ್ಮಾದ ಶಮನವಹುದು.

ಶ್ಲೋ ॥ ಪಿಪ್ಪಲೀಕಠಕಾಸ್ಥೀನಿ ನಾರೀಕ್ಷೀರೇಣಪಿಷಯೇತ್ । ತನ್ನಿಬಿತ್ವಾ
ಕರುಕ್ತಾಯ ಪಿತ್ತೋನ್ಮಾದಪ್ರಶಾಂತಯೇ ॥

ಟೀ ॥ ಹಿಪ್ಪಲಿ, ಬಿಲ್ಲದಬೀಜ, ಇವುಗಳನ್ನು ಮೊಲೆಹಾಲಲ್ಲಿ ಅರೆದು ಕಲ್ಕವಮಾಡಿ ಆ ಹಾಲಲ್ಲೇ ಕದಡಿ ಪ್ರಾತಃಕಾಲದಲ್ಲಿ ಕುಡಿಯ ಕೊಡಲು ಪಿತ್ತೋನ್ಮಾದ ಪರಿಹಾರವಹುದು.

(ಉನ್ಮಾದಕ್ಕೆ ಬ್ರಾಹ್ಮ್ಯಾದಿವರ್ತಿ.)

ಶ್ಲೋ॥ ಬ್ರಾಹ್ಮೀಂ ಚೈಂದ್ರೀಂ ವಿಡಂಗಂ ಚ ಮಾದ್ರೀಂ ವ್ಯೋಷಂ ಚ ಹಿಂಗುಕೈಃ।
ವರಾಂ ವಿಷಘ್ನಾಂ ಲಶುನಂ ವಿಶಲ್ಯಾಂ ಸುರಸಾಂ ವಚಾಂ ॥ ಜ್ಯೋತಿಷ್ಮ
ತೀಂಚ ನುಸ್ಪಶಾಂ ಅಪಂಕೀಂಚ ಕೋಟಿಕಾಂ । ಆಕ್ಷಿಕಾಂಚ ಬಸ್ತ
ಮೂತ್ರೇಣ ಪಿಷ್ಟ್ವಾ ಛಾಯಾವಿಶೋಷಿತಾ ॥ ವರ್ತಿರ್ನಸ್ಯಾಂಜನಾಲೇಪ
ಧೂಪೈರುನ್ಮಾದನಾಶಿನೀ ॥

ಟೀ॥ ಒಂದೆಲಗನಸೊಪ್ಪು, ಮುಂಡಗಳ್ಳಿಯಬೇರು, ನಾಯಿವಿಳಂಗ, ತ್ರಿಕಟುಕ, ಚವ್ಯ, ಇಂಗು, ಜಟಾಮಾಂಸಿ, ಮಾಗ್ವಾ, ತ್ರಿಫಳೆ, ಅರಿಬಜೆ, ಉಳ್ಳಿ, ವಿಶಲ್ಯಾ, ರಾಸ್ನೆ, ಬಜೆ, ಗಂಸುಂಗೇಬೀಜ, ನೆಲಗುಳ್ಳದಬೇರು, ಗಂಡುಮಗುಚನಬೇರು, ಕುರುಟಿಗೆಬೇರು, ಕನ್ನೆಲೆಕುಳಿಕನಗಡ್ಡೆ, ಇವುಗಳನ್ನು ಸಮಾಂಶವಾಗಿ ಆಡಿನಮೂತ್ರದಲ್ಲಿ ಅರದು, ಬತ್ತಿಮಾಡಿ, ನೆಳಲಲ್ಲಿ ಒಣಗಿಸಿ, ಗೋಮೂತ್ರದಲ್ಲಿ ನಸ್ಯ, ನಿಂಬೇಹಣ್ಣಿನ ರಸದಿಂದ ಅಂಜನ, ಗೋಮೂತ್ರದಿಂದ ಅಂಗಲೇಪ, ಆಮುದುರುಗಳಿಂದ ಧೂಪ, ಇಷ್ಟನ್ನು ಮಾಡಿಸಲು ಉನ್ಮಾದ ಶಮನವಹುದು.

ಶ್ಲೋ ॥ ನಿಂಬಪತ್ರಾಸ್ಥಿಲಶುನಲೇಪಸ್ಸರ್ವಗ್ರಹಾಪಹಃ ॥

ಟೀ॥ ಬೇವಿನಎಲೆಗಳ ಉರಿಹಾಕಿದ ಗಡ್ಡೆಗಳನ್ನು, ಬೆಳ್ಳುಳ್ಳಿಯನ್ನು ಸಹ ಗೋಮೂತ್ರದಿಂದ ಅರದು ಮೈಗೆ ಲೇಪನಮಾಡುವದರಿಂದ ಸರ್ವಗ್ರಹೋನ್ಮಾದ ಶಮನವಹುದು.

ಶ್ಲೋ ॥ ಶಿರೀಷಬೀಜಂ ಸಿಂಧೂತ್ಥಂ ಪಿಪ್ಪಲೀಂ ಮರಿಚಂ ತಥಾ। ಗೋಮೂ

ಶಿರೀಷಾಂಜನಂ ಕುರ್ಯಾಲ್ಲಶುನಂ ಮರಿಚಂ ವಚಾಂ॥ ***************

ಟೀ॥ ಬಾಗೀಬೀಜ, ಸೈಂಧವಲವಣ, ಹಿಪ್ಪಲಿ, ಮೆಣಸು, ಇವು ನಾಲ್ಕನ್ನೂ ಸಮಾಂಶವಾಗಿ ಗೋಮೂತ್ರದಿಂದ ಅರದು ಗುಳಿಗೆಗಳುಮಾಡಿ, ಒಣಗಿಸಿ ಇರಿಸಿಕೊಂಡು ಗೋಮೂತ್ರದಿಂದ ತೇಯದು ಕಣ್ಣಿಗೆ ಹಚ್ಚಲು ಉನ್ಮಾದಶಮನವಹುದು. ಅದಲ್ಲದಿದ್ದರೆ ಬೆಳ್ಳುಳ್ಳಿ, ಮೆಣಸು, ಬಜೆ ಈ ಮೂರನ್ನೂ ಗೋಮೂತ್ರದಿಂದ ಅಂಜನವಿಕ್ಕುವದು.

[ಉನ್ಮಾದಕ್ಕೆ ಹಿಂಗ್ವಾದಿಘೃತ]

ಶ್ಲೋ॥ ಹಿಂಗುಸೌವರ್ಚಲವ್ಯೋಷೈರ್ದ್ವಿಪಲಾಂಶೈರ್ಘೃತಾಢಕಂ। ಸಿದ್ಧಂ ಸಮೂತ್ರಮುನ್ಮಾದಭೂತಾಪಸ್ಮಾರನುತ್ಪರಂ॥

ಟೀ॥ ಒಂದು ಕೊಳಗ ಹಸುವಿನ ತುಪ್ಪದಲ್ಲಿ ಒಂದು ಕೊಳಗ ಹಸುವಿನ ಮೂತ್ರಹನಿಸಿ, ಅದರಲ್ಲಿ ಇಂಗು, ಸೌವರ್ಚಲವಣ, ಶುಂಠಿ, ಮೆಣಸು, ಹಿಪ್ಪಲಿ, ಈ ಆಯಿದೂ ಪ್ರತ್ಯೇಕ ಎರಡು ಪಲಗಳನ್ನು ಸಣ್ಣನಾಗಿ ಚೂರ್ಣಿಸಿ ಕದಡಿ ಮೃದ್ವಗ್ನಿಯಿಂದ ಚನ್ನಾಗಿ ಪಾಕಮಾಡಿ ಹದದಲ್ಲಿ ಇಳುಹಿ ದಿನಂಪ್ರತಿ ಉದಯಕಾಲದಲ್ಲಿ ನಾಕುವರಹ ತೂಕವಂ ದೇಹಬಲವರಿತು ಕೊಡಿಸಲು ಉನ್ಮಾದಶಮನವಹುದು.

(ಉನ್ಮಾದಕ್ಕೆ ಅಶ್ವಗಂಧಾದಿತೈಲ.)

ಶ್ಲೋ॥ ಅಶ್ವಗಂಧಾಜಗಂಧೋಗ್ರಗಂಧಾಲಶುನಸರ್ಷಪೈಃ। ರಾಸ್ನಾವಯಸ್ಥಾಗೋಲೋಮೀ ಯುಕ್ತಂ ತೈಲಂ ವಿಪಾಚಯೇತ್॥ ಗೋಮೂತ್ರಸಕೃತಂ ಪಾನನಸ್ಯಾಭ್ಯಂಗಾನುವಾಸನೈಃ॥

ಟೀ॥ ಹಿರೇಮದ್ದಿನಗೆಣಸು, ನಾರುಂಬೇಳೆಬೇರು, ಬಜೆ, ಬೆಳ್ಳುಳ್ಳಿ, ಸಾಸುವೆ, ರಾಸ್ನೆ, ಅಳಲೇಕಾಯಿ, ಗರಿಕೆ, ಇಷ್ಟನ್ನೂ ಪ್ರತ್ಯೇಕ ನಾಕುವರಹ ತೂಕವನ್ನು ಸಣ್ಣನಾಗಿ ಚೂರ್ಣಿಸಿ, ಒಂದುಬಳ್ಳ ತೈಲದಲ್ಲಿ ಕದಡಿ ಒಂದುಬಳ್ಳ ಗೋಮೂತ್ರವನ್ನೂ ಹನಿಸಿ ಪಾಕಮಾಡಿ, ಹದದಲ್ಲಿ ಇಳುಹಿ ಪಾನ, ನಸ್ಯ, ಅಭ್ಯಂಗನ, ಅನುವಾಸನೆಗಳಂ ಮಾಡಿಸಲು ಸಕಲ ಉನ್ಮಾದ ಭೂತಗ್ರಹಂಗಳೂ ಶಮನವಹವು.

(ಕೂಶ್ಮಾಂಡ ಘೃತ)

ಶ್ಲೋ॥ ಪಾದಿಕಂ ಷೋಡಶಗುಣೇ ಕೂಶ್ಮಾಂಡಸ್ವರಸೇ ಘೃತಂ। ಯಷ್ಟಿಕಲ್ಕಂ ಪಿಬೇತ್ಪ್ರಾತರುನ್ಮಾದಾಪಸ್ಮೃತೀರ್ಜಯೇತ್॥

ಟೀ॥ ಹದಿನಾರುಬಳ್ಳ ಬೂದಿಗುಂಬಳದಕಾಯಿ ರಸದಲ್ಲಿ ಒಂದುಬಳ್ಳ ಹಸುವಿನ ತುಪ್ಪವಹುನಿಸಿ, ಯಷ್ಟಿಮಧುಕವಂ ಕಲ್ಕವಮಾಡಿಹಾಕಿ ಕಾಯಿಸಿ ಹದದಲ್ಲಿ ಯಿಳುಹಿ, ದಿನಂಪ್ರತಿ ವುದಯಕಾಲದಲ್ಲಿ ನಾಲ್ಕುವರಹತೂಕ ಸೇವಿಸಲು ಸಕಲವುನ್ಮಾದಗಳೂ ಶಮನವಹುವು.

(ಬ್ರಾಹ್ಮೀಘೃತ.)

ಶ್ಲೋ॥ ದ್ವಿಪ್ರಸ್ಥಸ್ವರಸಾದ್ಬ್ರಾಹ್ಮ್ಯಾಘೃತಪ್ರಸ್ಥಂವಿಪಾಚಿತಂ। ವ್ಯೋಷಶ್ಯಾಮಾತ್ರಿವೃದ್ದಂತೀಶಂಖಪುಷ್ಪೀನೃಪದ್ರುಮೈಃ॥ ಸಪ್ತಲಾಕೃಮಿಜಿತ್ಕಲ್ಕೈಃ ಸರ್ವೈಸ್ತೈರಕ್ಷಸಂಮಿತೈಃ। ಪಲವೃದ್ಧ್ಯಾಪ್ರಯುಂಜೀತಪಲಂಮಾತ್ರಾಂತಕುಷ್ಪಲಂ॥ ಉನ್ಮಾದಕುಷ್ಠಾಪಸ್ಮಾರಹರಂವಂಧ್ಯಾಸುತಪ್ರದಂ। ವಾಕ್ಸ್ಪಷ್ಟಸ್ವರಮೇಧಾಕೃದಗ್ರ್ಯಂಬ್ರಾಹ್ಮೀಘೃತಂಸ್ಮೃತಂ॥

ಟೀ॥ ಒಂದೆಲಗನಸೊಪ್ಪಿನರಸ ಯೆರಡುಬಳ್ಳದಲ್ಲಿ ಒಂದುಬಳ್ಳ ಹಸುವಿನತುಪ್ಪವಹುನಿಸಿ ಕಾಯಿಸುವಾಗ ಹಾಕುವ ಕಲ್ಕದ್ರವ್ಯ—ಶುಂಠಿ, ಮೆಣಸು, ಹಿಪ್ಪಲಿ, ಕರೀಕಿಗಡೆ, ಬಜೆ, ಕಟ್ಟಪಕ್ತಿ, ಗೇಬೀರು, ಕಕ್ಕೇಬೀರಿನ ಕೊರ್ಕು, ಪಳಿತ ಬಾಳೆಮೊಲೆಕುರಿ, ಯಿಷ್ಟನ್ನು ಪ್ರತ್ಯೇಕ ನಾಲ್ಕುವರಹತೂಕವಂ ಚೂರ್ಣಿಸಿ ಹಾಕಿ ಕಾಯಿಸಿ ಹದದಲ್ಲಿಯಿಳುಹಿ ದಿನಂಪ್ರತಿ ಉದಯಕಾಲದಲ್ಲಿ ನಾಲ್ಕುವರಹತೂಕವಂ ತೊಡಗಿ ಒಂದುಹಲ, ಯೆರಡುಹಲ, ಮೂರುಹಲ, ನಾಲ್ಕುಹಲಪರ್ಯಂತ ಸೇವಿಸಲು ಉನ್ಮಾದ, ಕುಷ್ಠ, ಅಪಸ್ಮಾರಗಳು ಶಮನವಹುವು. ಬಂಜೆಯರುಗಳಿಗೆ ಸಂತಾನವುಂಟಾಗುವದು, ವಾಕ್ಶುದ್ಧಿ ವುಂಟಾಗುವದು, ಶೋಭನವಾದಸ್ವರ ವುಂಟಾಗುವದು, ಬುದ್ಧಿಯುಂಟಾಗುವದು, ಯಿದು ಬ್ರಾಹ್ಮೀಘೃತ(ಶ್ರೇಷ್ಠವಾದದ್ದು.

(ಕಲ್ಯಾಣಘೃತ.)

ಶ್ಲೋ॥ ವರಾವಿಶಾಲಾಮರದೇವದಾರ್ವೈಲವಾಲುಕೈಃ। ದ್ವಿಶಾರಿಬಾದ್ವಿರಜನೀದ್ವಿಸ್ಥಿರಾಫಲಿನೀನತೈಃ॥ ಬೃಹತೀಕುಷ್ಠಮಂಜಿಷ್ಠಾನಾಗಕೇಸರದಾಡಿಮಂ। ವೆಲ್ಲಾತಾಲೀಸಪತ್ರೈಲಾಮಾಲತೀಮುಕುಳೋತ್ಪಲೈಃ॥ ಸದಂತೀಪದ್ಮಕಹಿಮೈಃಕರ್ಷಾಂಶೈಸ್ಸರ್ಪಿಷಃಪಚೇತ್। ಪ್ರಸ್ಥಂಭೂತಗ್ರಹೋನ್ಮಾದಕಾಸಾಪಸ್ಮಾರಪಾಪಜಿತ್॥ ಪಾಂಡುಕಂಡೂವಿಷಶೋಷಮೇಹ

ಮೋಹೇಜ್ವರೇಗರೇ ! ಅಲಕ್ಷ್ಯಲ್ಪರಜಸಿದ್ಧೈರ್ವೋಪಹತಚೇತಸಿ॥ ಅಮೇಧಸಿ ಷ್ಕ ಲಬ್ಧ್ವಾಪಿಸ್ಮೃತಿಕಾಮೇಲ್ಪಪಾವಕೇ। ಬಲ್ಯಂಮಾಂಗಲ್ಯಮಾಯುಷ್ಯಂಕಾಂ ತಿಲಾವಣ್ಯಪುಷ್ಟಿದಂ॥ಕಲ್ಯಾಣಕಮಿದಂಸರ್ಪಿಃಶ್ರೇಷ್ಠಂಪುಂಸವನೇಷುಚ॥

ಟೀ॥ ಒಂದು ಕೊಳಗ ಶುದ್ಧಾಂಬುಕಷಾಯದಲ್ಲಿ ಒಂದುಬಳ್ಳ ಹಸುವಿನ ತುಪ್ಪವನ್ನೂ, ಒಂದುಬಳ್ಳ ಹಸುವಿನಹಾಲನ್ನೂಹಾಕಿಸಿ ಪಾಕವಮಾಡುವಸ ಮಯದಲ್ಲಿ ಅದಕ್ಕೆ ಹಾಕುವ ಕಲ್ಕ ದ್ರವ್ಯ-ತ್ರಿಫಲೆ, ಹಾವುಮೆಕ್ಕೆ ಬೇರು, ಮೆಣಸು, ದೇವದಾರಿಬೇರು, ಸುಗುಮಗುಳಿ, ಮುಡಿವಾಳ, ಮಾಗಳಿಗೆಣಸು, ನೆ ಲಮಾಗಳಿಬೇರು, ಅರಿಸಿನ, ಮರದರಸಿನ, ಒಂದೆಲೆಹೊನ್ನೆ, ಮೂರೆಲೆಹೊನ್ನೆ ಗಳಬೇರು, ಲಾಳಗಬೇರು, ಗಂಧಿಕಠಗರ, ನೆಲಗುಳ್ಳದಬೇರು, ಕೋಷ್ಠ, ಮಂ ಜಿಷ್ಠೆ, ನಾಗಕೇಸರ, ದಾಳಿಂಬದಬೀಜ, ವಾಯುವಿಳಂಗ, ತಾಳೀಸಪತ್ರಿ, ಮೇ ಲೆಕ್ಕಿ, ಜಾಜಿಮೊಗ್ಗು, ನೆಯಿದಲಗಡ್ಡೆ, ಕಿಗಡೆ, ಪದ್ಮಕ, ಶ್ರೀಗಂಧ, ಇವ್ವ ನ್ನೂ ಪ್ರತ್ಯೇಕ ನಾಲ್ಕು ವರಹತೂಕ ಸೂಕ್ಷ್ಮವಾಗಿಚೂರ್ಣಿಸಿ, ತುಪ್ಪದಲ್ಲಿ ಕಲೆಸಿ, ಪಾಕವಮಾಡಿ, ಹದದಲ್ಲಿಯಿಳುಹಿ, ದಿನಂಪ್ರತಿ ವುದಯಕಾಲದಲ್ಲಿ ನಾ ಲ್ಕು ವರಹತೂಕವಸೇವಿಸಲು ಭೂತಗ್ರಹ, ಉನ್ಮಾದ, ಕಾಸ, ಅಪಸ್ಮಾರ, ಪಾಂಡು, ತಿಮಿರ, ವಿಷ, ತುರಿ, ಮೂರ್ಛೆ, ಪ್ರಮೇಹ, ಜ್ವರ, ಕ್ರಿಮಿ, ವಿ ಷ, ಶುಕ್ಲವೃದ್ಧಿ, ಪುಷ್ಪವೃದ್ಧಿ, ದೇವತಾಪಚಾರದಿಂದ ವುಂಟಾದ ಮನೋವ್ಯೈ ಕಲ್ಯ, ಮೆದೆ, ಬಿಕ್ಕಳುಸುಡಿ, ನೆನಹು, ಇವುಗಳೆಲ್ಲವೂಪರಿಹಾರನಾಗಿ, ಅಗ್ನಿ ಬಲ, ಮಾಂಗಲ್ಯ, ಆಯುಷ್ಯ, ದೇಹಕಾಂತಿ, ರೂಪ, ಪುಷ್ಟಿ, ಇವುಗಳೂ ವುಂ ಟಾಗುವದು. ಇದು ಕಲ್ಯಾಣಘೃತ, ಮಹೋತ್ತಮ, ಸಂತಾನವುಂಟಾಗುವದು.

ಶ್ಲೋ॥ ಉನ್ಮಾದಶಾಂತಯೇಭಕ್ತ್ಯಾಪೂಜಯೇದ್ವೃಷಭಧ್ವಜಂ। ಗ್ರ ಹಸ್ಯಭೂತವರ್ಗಸ್ಯಚೋನ್ಮಾದಸ್ಯಚಧೀಮತಾ॥ ವಿಶೇಷೇಣಪ್ರಕರ್ತವ್ಯ ಮಪಸ್ಮಾರಚಿಕಿತ್ಸಿತಂ ॥

ಟೀ॥ ಉನ್ಮಾದಪರಿಹಾರಾರ್ಥವಾಗಿ ಭಕ್ತಿಯಿಂದ ವೃಷಭಧ್ವಜನಾದ ಮ ಹಾದೇವನಂಪೂಜಿಸುವುದು, ಗ್ರಹ, ಭೂತ, ಉನ್ಮಾದ, ಯೀಮೂರಕ್ಕೂ ಅಪಸ್ಮಾರ ಚಿಕಿತ್ಸೆಯಂಮಾಡುವುದು.

(ಪ್ರತಾಪಲಂಕೇಶ್ವರರಸ ಕಲ್ಯಾಣಘೃತಂ)

ಶ್ಲೋ॥ ಪಕ್ಷೋದ್ವಿಕಾರಿಭಾದೀನಜಲೇಪಕ್ತ್ವೈಕಪಿಂಶತಿಂ। ರಸೇತಸ್ಮಿ

ಪಚೇತ್ಸರ್ಪಿಃ ಸ್ಪೃಷ್ಟಿಕ್ಷೀರಚತುರ್ಗುಣಂ॥ ವರಾರಿಮೇಧಾ ಕಾಕೋಳೀ ಕಪಿಕಚ್ಛೂ
ವಿಷಾಣಿಭಿಃ । ಸೂರ್ಯಸಣೀಯುಕ್ತೈರೇತಂ ಮಹಾಕಲ್ಯಾಣಕಂ ಘೃತಂ॥
ಬೃಂಹಣಂ ಸನ್ನಿಪಾತಘ್ನಂ ಪೂರ್ವಸ್ಮಾದಧಿಕಂ ಗುಣೈಃ॥

ಟೀ॥ ಇದರ ಹಿಂದೆ ಹೇಳಿದ ಔಷಧಂಗಳಲ್ಲಿ ಹಾಗಲಿ ಬೀಜ ಮೊದಲಾದ ಇಪ್ಪತ್ತೊಂದು ಔಷಧಗಳನ್ನು ಪ್ರತ್ಯೇಕ ಒತ್ತುಗಲ ನಾಗಳಸೇರಿನಲ್ಲಿ ಕಷಾಯವೆರ್ತ್ತಿ, ಚಾತುರ್ಭಾಗಾವಶೇಷವಾಗಿ ಕಾಯಿಸಿ ಶೋಧಿಸಿಕೊಂಡು ಒಂದು ಕೊಳಗ ಕಷಾಯದಲ್ಲಿ ಒಂದು ಬಳ್ಳ ತುಪ್ಪ, ಒಂದು ಕೊಳಗ ಹಸುವಿನ ಹಾಲಂ ಹನಿಸಿ, ಪಾಕವಮಾಡುವಾಗ ಹಾಕುವ ಕಲ್ಕದ್ರವ್ಯ—ಕಾಕೋಳಿ, ಮೇದೆ, ಮಹಾಮೇದೆ, ಕ್ಷೀರಕಾಕೋಳಿ, ನಸುಗುನ್ನಿಬೀಜ, ಅಮರದವಳ್ಳಿ, ಕಾಡಹೆಸರು, ಇಷ್ಟನ್ನು ಪ್ರತ್ಯೇಕ ನಾಲ್ಕುವರಹ ತೂಕವನ್ನು ಸಣ್ಣಗೆ ಚೂರ್ಣಿಸಿ ಹಾಕಿ ಕಾಯಿಸಿ ಹದದಲ್ಲಿ ಇಳುಹಿ, ಉದಯಕಾಲದಲ್ಲಿ ದಿನಂಪ್ರತಿ ಸೇವಿಸಲು ಮಹಾಬೃಂಹಣ, ಸನ್ನಿಪಾತವಂದುಂಟಾದಲು ನ್ಯಾಸ, ಇವು ಪರಿಹರವಹುವು. ಈ ಕಲ್ಯಾಣಘೃತ ಮೊದಲು ಹೇಳಿದ ಕಲ್ಯಾಣಘೃತಕಿಂತಲೂ ಅಧಿಕ ಗುಣವುಂಟಾಹುದು.

( ಮಹಾಕಲ್ಯಾಣಘೃತ. )

ಶ್ಲೋ॥ ಕೂಶ್ಮಾಂಡೇಕ್ಷುಶತಾವರೀಕದಳೀ ಶಾಕಂ ದಂಡಕನ್ಯಾಮೃತಾ ।
ಮಾಸಂ ವ್ಯಾಘ್ರೀ ಸಹಸ್ರಪತ್ರಧರಣೀ ಸಂದಾನ್ಯತಾಮಾಮಲಿಕಾ ॥ ಶಾ
ಲ್ಮಲ್ಯಾಮಲಕೀ ಚ ಹೀರಸಹಿತಂ ಸರ್ವಾಂಬರಂ ಸಾಂಶಕಂ । ಪ್ರಸ್ಥಂಬಾ
ಷ್ಪಯೋಘೃತಂ ಸಮಪಯಸ್ಸ್ಯಾಕ್ಷ ಸತ್ಪಾತ್ರಿಕೇ ॥ ಯಷ್ಟೀಚಂದನಪು
ಷ್ಕರದ್ರಾಕ್ಷಕಟುಕಂ ಪಂಚಾಂಬುಮಾತ್ರೋದ್ಭವಾ । ತ್ರಿವೃತ್ತ್ರಯತ್ರಿಫಲಾವ
ಚಾಚವಿಕಾತಕ್ಕೋಲಜಾತೀಫಲಂ ॥ ಮೇಧಾಕರ್ಕಟಶೃಂಗಿಕಾಗ
ರುಜಟಾಕಾರೀ ಚ ಭಾರ್ಗೀ ನಿಶಾ । ಮೂಲಂ ಜೀರಕರೋಹಿಣೀದ್ರುಮ
ಯುತಾ ಮಂಜಿಷ್ಠಕಾ ವತ್ಸಕಾ॥ ಮೃದ್ವೀಕಾಘನನಾಗಜಾತಿಮುಕುಳಾಮು
ಸ್ತಾ ಚತುರ್ಜಾತಕಂ । ಜೀವಂತ್ಯುತ್ಪಲಶಾರಿಬಾ ಚ ಮಧುಕಾ ಮತ್ಸ್ಯಾ
ಕ್ಷೀಕಲ್ಕೈಃ ಪಚೇತ್ ॥ ಮಹಾಕಲ್ಯಾಣಕಂ ನಾಮ ಶಿವದೇವೇನ ಭಾಷಿತಂ ॥
ಮಂತ್ರೇಣ ರುದ್ರೋ ಶೋಗೀವ ಸರ್ವಪಿತ್ತವಿಕಾರಜಿತ್ ॥

ಟೀ॥ ಕುಂಬಳಕಾಯಿರಸ, ಕಬ್ಬಿನ ಹಾಲು, ಆಷಾಢೀ ಗೆಣಸಿನ ರಸ, ಬಾಳೆಗಡ್ಡೆ

ರಸ, ಕೋಡುಸರದರಸ, ಅಮರದವಳ್ಳಿಗರಸ, ನೆಲದಾಳಿಯರಸ, ಕಾವಲೆಗಣಸಿ ನರಸ, ಸಾಂಬೀರಸ, ಹಾವುಮೆಕ್ಕೆರಸ, ತುಲಸಿನರಸ, ನೆಲ್ಲೀಕಾಯಿರಸ, ಈಇನ್ನೆರಡು ರಸಗಳು ಪ್ರತ್ಯೇಕ ವಂದೂವರೆಮಾನ, ಎಲ್ಲವೂ ಕೂಡಿ ವೊಂದು ಕೊಳಗರಸ, ಅದರಲ್ಲಿ ವೊಂದುಬಳ್ಳ ಉಸುಬಿನಉಪ್ಪವೂ, ಉಪ್ಪಿಗೆ ಸರಿ ಉಸುಬಿನಹಾಲೂ ಕೂಡಿಸಿ, ಕಾಯಿಸುವಾಗ ಅದಕ್ಕೆ ಹಾಕುವ ಕಲ್ಕದ್ರವ್ಯ— ಯಷ್ಟಿಮಧುಕ, ಶ್ರೀಗಂಧ, ಪುಷ್ಕರಮೂಲ, ಶುಂಠಿ, ಮೆಣಸು, ಹಿಪ್ಪಲಿ, ಬಿದರಕಡಲೆ, ಕೊರಟಿಗೆಬೇರು, ಕಲ್ಲನಾರು, ಅಳಲೇಕಾಯಿ, ನೆಲ್ಲೀಚಟ್ಟು, ತಾರೇಕಾಯಿ, ಲವಂಗ, ಚವ್ಯ, ಚಿಕ್ಕೇಲ, ಜಾಯಿಕಾಯಿ, ಮೆಂತ್ಯ, ಕರ್ಕಾಟಕಶೃಂಗಿ, ಅಗಿಲು, ಜಟಾಮಾಂಸಿ, ರೇಣುಕ, ಗಂಟುಭಾರಂಗಿ, ಅರಿಸಿನ, ಹಿಪ್ಪಲಿ, ಹಿಪ್ಪಲಿಮೂಲ, ಜೀರಿಗೆ, ಕಟುಕರೋಹಿಣಿ, ದೇವದಾರು, ಮಂಜಿಷ್ಠೆ, ಕೊಡಸೀಗನಚಕ್ಕೆ, ದ್ರಾಕ್ಷೆಹಣ್ಣು, ಬಿಲುಕೀಬೇರು, ಜಾಜಿಮೊಗ್ಗು, ಕೊಡನಾರಿಗಡ್ಡೆ, ಯಾಲಕ್ಕಿ, ಲವಂಗಚೆಕ್ಕೆ, ಲವಂಗಪತ್ರೆ, ನಾಗಕೇಸರ, ಸೀಹಾಳೆಬೇರು, ನೆಯ್ದಿಲಗಡ್ಡೆ, ಸೊಗದೆ, ಯಷ್ಟಿಮಧುಕ, ಹೊನ್ನಗನ್ನೆಬೇರು, ಇಷ್ಟು ಪ್ರತ್ಯೇಕ ವೊಂದುವರಹತೂಕವನ್ನು ಸಣ್ಣದಾಗಿ ಚೂರ್ಣಿಸಿ ಆ ಕುಪ್ಪದಲ್ಲಿ ಕಲೆಸಿ ಪಾಕವಮಾಡಿ, ಘಟದಲ್ಲಿ ಯಿಟ್ಟು, ದಿನಂಪ್ರತಿ ವುದಯಕಾಲದಲ್ಲಿ ನಾಲ್ಕುವರಹತೂಕ ಸೇವಿಸಲು ಸಕಲವಾದ ಪಿತ್ತದಿಂದವುಂಟಾದ ರೋಗಗಳೂ, ಮಂತ್ರದಿಂದ ಕಟ್ಟಲ್ಪಟ್ಟ ಸರ್ಪ ಹೇಗೆ ಅಡಗುವದೋ ಹಾಗೆ ಅಡಗುವವು. ಇದು ಮಹಾಕಲ್ಯಾಣಘೃತ, ಶಿವದೇವನಾದ ಪರಮೇಶ್ವರನಿಂದ ನಿರೂಪಿಸಲ್ಪಟ್ಟದ್ದು.

ಶ್ಲೋ ॥ ಮುಕ್ತಂ ಮನೋವಿಕಾರೇಣ ತ್ವಮಿತ್ಥಂ ಕೃತವಾನಿತಿ । ನ ಬ್ರೂಯಾ
ದ್ವಿಷಮೈರಿಷ್ಟೈಃ ಕ್ಲಿಷ್ಟಂ ಚೇತೋಸ್ಯ ವ್ಯಾಕುಲಮ್ ॥

ಟೀ॥ ಉನ್ಮಾದರೋಗಿಯು ಮನೋವಿಕಾರವಿಲ್ಲದೆ ಸ್ವಸ್ಥನಾಗಿಯಿರುವವನ ಕೂಡ ಉನ್ಮಾದವಾಗಿದ್ದ ಸಮಯದಲ್ಲಿ ಯಿಂತಹ ಚೇಷ್ಟೆಗಳನ್ನು ಮಾಡಿದೆಯೆಂದು ಹೇಳಲಾಗದು, ಅತನಿಗೆ ಯಿಷ್ಟವಾದ ಆಹಾರಗಳಂ ಕೊಡಿಸಿ ಮೊದಲು ವಿಕಳವಾದ ಮನಸ್ಸಿಗೆ ಸಂತರ್ಪಣವ ಮಾಡಿಸುವದು.

(ಅಪಸ್ಮಾರಚಿಕಿತ್ಸೆ.)

ಶ್ಲೋ ॥ ಅಪಸ್ಮಾರಶ್ಚತುರ್ಭೇದೋ ವಾತಾದ್ಯೈರ್ನಿಚಯೇನ ಚ । ಜಾಯ

ಕುಪಿತಾ ಕೆಚಿತ್ತೇ ಚಿನ್ತಾಶೋಕಭಯಾದಿಭಿಃ ॥ ಉನ್ಮಾದವತ್ಪ್ರಕುಪಿತೈಶ್ಚಿತ್ತದೇಹಗತೈರ್ಮಲೈಃ । ಹತೇ ಸತ್ವೇ ಹೃದಿ ವ್ಯಾಪ್ತೇ ಸಂಜ್ಞಾವಾಹಿಷು ಖೇಷು ಚ । ತಮೋವಿಶನ್ಮೂಢಮತಿರ್ಬೀಭತ್ಸಾಃ ಕುರುತೇ ಕ್ರಿಯಾಃ । ದನ್ತಾನ್ ಖಾದನ್ವಮನ್ಫೇನಂ ಹಸ್ತೌ ಪಾದೌ ಚ ವಿಕ್ಷಿಪನ್ ॥ ಪಶ್ಯನ್ನಸನ್ತಿ ರೂಪಾಣಿ ಪ್ರಸ್ಖಲನ್ಪತತಿ ಕ್ಷಿತೌ ॥

ಟೀ ॥ ವಾತಾಪಸ್ಮಾರ, ಪಿತ್ತಾಪಸ್ಮಾರ, ಶ್ಲೇಷ್ಮಾಪಸ್ಮಾರ, ತ್ರಿದೋಷಜನ್ಯಾಪಸ್ಮಾರವೆಂದು, ಅಪಸ್ಮಾರ ನಾಲ್ಕು ವಿಧ, ಚಿಂತೆ, ಶೋಕ, ಭಯ ಮೊದಲಾದವುಗಳಿಂ ಮನಸ್ಸು ಕ್ಷೋಭಿಸಿ, ಅದರಿಂದ ಅಪಸ್ಮಾರ ಉಂಟಾಗುವದು, ಸತ್ವಗುಣನಷ್ಟವಾಗಿ ಹೃದಯದಲ್ಲಿ ವ್ಯಾಪಿಸಿಕೊಂಡಿರುವ ನಾಡೀರಂಧ್ರಗಳನ್ನು ಜ್ಞಾನಪ್ರವೇಶಿಸುವದು. ಆಮೇಲೆ ತಮೋಗುಣಹೆಚ್ಚಿ ಮೇಲೂಕೆಳಿಯು ಬಿಡೋಸುವದು, ಅದರಿಂದ ಭಯಂಕರವಾದ ಚೇಷ್ಟೆಯನ್ನುಂಟುಮಾಡುವದು, ಹಲ್ಲುಕಚ್ಚುವನು, ನೊರೆಯು ಕಾರುವನು, ಕೈಕಾಲುಗಳಂ ನಿಮಿರಿಸುವನು, ದಿಕ್ಕುದಿಕ್ಕಿನಲ್ಲಿ ನಾನಾ ರೂಪಗಳಂ ಕಾಣುವನು, ಎಡಹುವನು, ನೆಲವನ್ನು ಕಚ್ಚಿಕೊಂಡು ಬೀಳುವನು.

( ಬಾಹಟದಲ್ಲಿ. )

ಶ್ಲೋ ॥ ಕೃಷ್ಣಪೀತಾಸಿತಾಭಾಸೋ ವಾತಪಿತ್ತಕಫೈಃ ಕ್ರಮಾತ್ । ಲಾಲಾಜಲಂ ವಮನ್ಸ್ವಾಪಾತ್ಸ ತ್ಯಾಜ್ಯಸ್ತ್ರಿದೋಷಜಃ ॥

ಟೀ ॥ ದೇಹ ಕಪ್ಪುಧಾತು ಕೂಡಿದ್ದರೆ ವಾತಾಪಸ್ಮಾರ, ಅರಿಸಿನಧಾತು ಕೂಡಿಯಿದ್ದರೆ ಪಿತ್ತಾಪಸ್ಮಾರ, ಬಿಳುಪುಧಾತು ಕೂಡಿಯಿದ್ದರೆ ಶ್ಲೇಷ್ಮಾಪಸ್ಮಾರ, ಮೂರುಧಾತುಗಳೂ ಕೂಡಿ ನೊರೆ ಕಚ್ಚಿಕೊಂಡು ಭೂಮಿಯಲ್ಲಿ ಬೀಳುವದು ತ್ರಿದೋಷಜಾಪಸ್ಮಾರ, ಅದು ಅಸಾಧ್ಯವೆಂದು ತಿಳಿವುದು.

(ಭಗೀರಥಸಂಹಿತೆಯಲ್ಲಿ.)

ಶ್ಲೋ ॥ ಅಕಸ್ಮಾಜ್ಜಾಯತೇ ಮೂರ್ಛಾ ಫೇನಂ ನಿರ್ಯಾತಿ ಚೇನ್ಮುಖಾತ್ । ಸರ್ವಾಂಗಂ ಕಂಪತೇ ಯಸ್ಯ ಅಪಸ್ಮಾರೀ ಭವೇನ್ನರಃ ॥ ಪಂಚಕರ್ಮಾಣಿ ಕರ್ತ್ರಿದಾ ಯಥಾದೋಷಂ ಪ್ರಯೋಜಯೇತ್ । ಸರ್ವತಶ್ಶುದ್ಧದೇಹಸ್ಯ ಉನ್ಮಾದಂ ಕುರುತೇ ಕ್ರಿಯಾ ॥ ತೀಕ್ಷ್ಣಂ ಕುರ್ಯಾದಪಸ್ಮಾರೇ ಕರ್ಮಭಿರ್ವಮನಾದಿಭಿಃ । ವಾತಿಕಂ ಬಸ್ತಿಭೂಯಿಷ್ಠೈಃ ಪೈತ್ರ್ಯಂ ಪ್ರಾಯೋ ವಿರೇಚನೈಃ ॥ ಶ್ಲೈಷ್ಮಿಕಂ ಪಾಟನದ್ರವ್ಯೈರಪಸ್ಮಾರಮುಪಾಚರೇತ್ ॥

ಟೀ॥ ಇದ್ದಕ್ಕಿದ್ದಂತೆ ಮೂರ್ಛೆಯುಂಟಾಗಿ ಬಾಯಲ್ಲಿ ನೊರೆ ಕಟ್ಟಿಕೊಂಡು ಸರ್ವಾಂಗದಲ್ಲೂ ಕಂಪನವುಂಟಾದರೆ ಅತನಂ ಅಪಸ್ಮಾರಿಯೆಂದು ತಿಳಿವುದು. ಅಂತಹ ಅಪಸ್ಮಾರಕ್ಕೆ ಮೊದಲೇ ವಮನ, ವಿರೇಚನ, ನಸ್ಯ, ಆಸ್ಥಾಪನ, ನಿರೂಹಂಗಳೆಂಬ ಪಂಚಕರ್ಮಗಳಂ ಮಾಡಿಸುವುದು. ಪಂಚಕರ್ಮಗಳಿಂದ ಶುದ್ಧವಾದದೇಹವುಳ್ಳವನಿಗೆ ಉನ್ಮಾದಹರವಾದ ಚಿಕಿತ್ಸೆಯನ್ನು ಮಾಡುವದು, ಅಪಸ್ಮಾರದಲ್ಲಿ ತೀಕ್ಷ್ಣವಾದ ವಮನವಿರೇಚನಗಳಂ ಮಾಡಿಸುವದು, ವಾತದಿಂದುಂಟಾದ ಅಪಸ್ಮಾರಕ್ಕೆ ವಸ್ತಿಕರ್ಮವನ್ನೂ, ಪಿತ್ತದಿಂದುಂಟಾದ ಅಪಸ್ಮಾರಕ್ಕೆ ವಿರೇಚನವನ್ನೂ, ಶ್ಲೇಷ್ಮದಿಂದುಂಟಾದ ಅಪಸ್ಮಾರಕ್ಕೆ ಪಚನವಾದ ಔಷಧವನ್ನೂ ಕೊಡಿಸುವದು.

ಶ್ಲೋ॥ ತ್ರಿಕಟುತ್ರಿಫಲಾದಾರುಹಿಂಗುಸೌವರ್ಚಲಂವಚಾ । ಕಷಾಯಂ
ಕ್ಷೌದ್ರಸಂಯುಕ್ತಮಪಸ್ಮಾರವಿನಾಶನಂ ॥

ಟೀ॥ ಶುಂಠಿ, ಮೆಣಸು, ಹಿಪ್ಪಲಿ, ಅಳಲೇಕಾಯಿ, ನೆಲ್ಲೀಚಟ್ಟು, ತಾರೇಕಾಯಿ, ಕುಪ್ಪದೇವದಾರು, ಇಂಗು, ಸಂವರ್ಚಲವಣ, ಬಜೆ, ಯಿಷ್ಟನ್ನೂ ಪ್ರತ್ಯೇಕ ಮೆಗದುವರಹತೂಕವನ್ನು ಒಂದುಬಳ್ಳನೀರಿನಲ್ಲಿ ಕಷಾಯವೆತ್ತಿ ಅಷ್ಟಾವಶೇಷವಾಗಿ ಕಾಯಿಸಿ ವುದಯಕಾಲದಲ್ಲಿ ಕುಡಿಯ ಕೊಡಿಸಲು ಅಪಸ್ಮಾರಶಮನವಹುದು.

ಶ್ಲೋ॥ ಕೂಶ್ಮಾಂಡಕಸಮುತ್ಥೇನರಸೇನಪರಿಪಿಷಿತಾ । ಅಪಸ್ಮಾರವಿನಾ
ಶಾಯಯಷ್ಟ್ಯಾಹ್ವಂಸಂಪಿಬೇತ್ತ್ರ್ಯಹಂ॥

ಟೀ॥ ಬೂದಿಗುಂಬಳದಕಾಯಿರಸದಲ್ಲಿ ಯಷ್ಟಿಮಧುಕವನ್ನು ಒಂದುಹಣಕ್ಕೆ ತಕ್ಕಷ್ಟು ಸಣ್ಣನಾಗಿ ಅರದು ಕುಡಿಯ ಕೊಡಿಸಲು ಅಪಸ್ಮಾರಶಮನವಹುದು.

(ತಂತ್ರಾಂತರದಲ್ಲಿ.)

ಶ್ಲೋ॥ ತರುಲಂಬಿತಚೋರಸ್ಯಗಳಪಾಶಕೃತಾಂಮಷೀಂ । ಶೀತೇನವಾ
ರಿಣಾಪೀತ್ವಾಹಂತ್ಯಪಸ್ಮಾರಮದ್ಭುತಂ॥

ಟೀ॥ ಕಳ್ಳನಹಿಡಿದು ಶಿಕ್ಷೆಮಾಡಿ ಕೊರಳಿಗೆ ಹಗ್ಗವಂಬೀರಿ ಮರದಮೇಲೆತೂಗುಹಾಕಿ ಯಿದ್ದಸ್ಥಳದಲ್ಲಿ ಆ ಹೆಣದಕೊರಳಲ್ಲಿ ಯಿದ್ದಹಗ್ಗವಂತೆಗದು ತಂದುಸುಟ್ಟುಕರಿಯಮಾಡಿ, ಆಕರಿಯನ್ನು ತಣ್ಣೀರಲ್ಲಿ ಕುಡಿಯಕೊಡಲು ಅತ್ಯಂತಅದ್ಭುತವಾದ ಅಪಸ್ಮಾರಶಮನವಹುದು.

ಶ್ಲೋ॥ ತೀಲಕ್ಷುತ್ತೈಲಲಶುನಂಪಯಸಾಚಶತಾವರೀಂ॥ ಬ್ರಹ್ಮೀರಸಂ

ಕುಷ್ಠಯುಕ್ತಂ ವಚಾಂ ವಾ ಮಧುಸಂಯುತಾಂ ॥ ***************

ಟೀ॥ ಮಜ್ಜಿಗೆಯಲ್ಲಿ ಬೆಳ್ಳುಳ್ಳಿ ಅರದು ಕುಡಿಸುವದು, ಹಾಲಲ್ಲಿ ಅರದು ಅಷಾಢಿಯ ರಸವನ್ನು ಕುಡಿಸುವದು, ಹಾಗಲ್ಲದಿದ್ದರೆ ವಂಜೆಲಗನಸೊಪ್ಪಿನ ರಸದಲ್ಲಿ ಚಂಗಲನೀರ ಕೋಷ್ಠವನ್ನು ಅರದು ಕುಡಿಸುವದು, ಅದಲ್ಲದಿದ್ದರೆ ಬಜೆಯ ಚೂರ್ಣವನ್ನು ಜೇನುತುಪ್ಪದಲ್ಲಿ ಕುಡಿಸಿದರೆ ಅಪಸ್ಮಾರ ಶಮನವಹುದು.

(ನಸ್ಯತೈಲ)

ಶ್ಲೋ ॥ ಶಿಗ್ರುಕುಷ್ಠಶಿಲಾಜಾಜಿಲಶುನವ್ಯೋಷಹಿಂಗುಭಿಃ । ಬಸ್ತಮೂತ್ರೇ ಶೃತಂ ತೈಲಂ ನಾವನಂ ಸ್ಯಾದಪಸ್ಮೃತೌ ॥

ಟೀ॥ ನುಗ್ಗೇಬೇರಿನ ತೊಗಟೆ, ಚಂಗಲಕೋಷ್ಠ, ಮಣಿಶಿಲೆ, ಜೀರಿಗೆ, ಬೆಳ್ಳುಳ್ಳಿ, ಶುಂಠಿ, ಮೆಣಸು, ಹಿಪ್ಪಲಿ, ಇಂಗು, ಇವುಗಳನ್ನೆಲ್ಲ ಪ್ರತ್ಯೇಕ ನಾಲಕು ವರಹತೂಕ ಆಡಿನಮೂತ್ರದಲ್ಲಿ ಅರದು ಒಂದುಬಳ್ಳ ಆಡಿನಮೂತ್ರವಂ ಹನಿಸಿ ಆ ಕಲ್ಕವನ್ನು ಕದಡಿ ಕಾಯಿಸಿ ಮೃದ್ವಗ್ನಿಯಿಂದ ಇಳುಹಿ ಮೂಗಿಗೆ ನಸ್ಯ ಮಾಡಿಸಲು ಅಪಸ್ಮಾರ ಶಮನವಹುದು, ಉನ್ಮಾದಶಮನ.

ಶ್ಲೋ ॥ ಫಣಿಜ್ಝಕಂ ಯವಕ್ಷಾರಂ ದೇವದಾರು ಮಯೂರಕಂ। ತ್ರಿಫಲಂ ತ್ರ್ಯೂಷಣಂ ಬೀಜಂ ನಕ್ತಮಾಲಶಿರೀಷಯೋಃ ॥ ಬಸ್ತಮೂತ್ರೇಣ ವಿಪಚೇತ್ತೈಲಮೇಭಿರ್ಮಹೌಷಧೈಃ। ಸಾಧಿತಂ ನಾವನಂ ತೈಲಮಪಸ್ಮಾರವಿನಾಶನಂ॥ ನಾವನಂ ತದಪಸ್ಮಾರಮುನ್ಮಾದಂ ಚ ನಿಯಚ್ಛತಿ॥

ಟೀ ॥ ಕಗ್ಗುರಳಿಬೀಜ, ಯವಕ್ಷಾರ, ದೇವದಾರು, ಮಯೂರಶಿಖಿ, ತ್ರಿಫಲೆ, ತ್ರಿಕಟುಕ, ಹೊಂಗೇಬೀಜ, ಬಾಗೇಬೀಜ, ಇವಿಷ್ಟನ್ನೂ ಪ್ರತ್ಯೇಕ ೩ ವರಹ ತೂಕಗಳನ್ನು ಆಡಿನ ಮೂತ್ರದಲ್ಲಿ ಅರದು ಒಂದುಬಳ್ಳ ಆಡಿನಮೂತ್ರದಲ್ಲಿ ಕದಡಿ ಒಂದುಬಳ್ಳ ಎಣ್ಣೆಯಂ ಹನಿಸಿ ಮೃದುಪಾಕದಲ್ಲಿ ಇಳುಹಿ ನಸ್ಯಮಾಡಿಸಲು ಅಪಸ್ಮಾರಶಮನವಹುದು, ಉನ್ಮಾದವೂ ಶಮನವಹುದು.

(ಶಂಖಪುಷ್ಪಘೃತಂ)

ಶ್ಲೋ ॥ ಶತಪಲಕಶಂಖಪುಷ್ಪಕ್ವಾಥೇ ತೈಲಾನ್ವಿತೇ ಸಕಲ್ಕಾಢ್ಯೇ॥ ಪಕ್ವಂ ಸರ್ಪಿಃ ಪಾನಾತ್ಸರ್ವಾಪಸ್ಮಾರನಾಶನಾಯ ಸ್ಯಾತ್ ॥

ಟೀ॥ ನೂರುಹಲ ಕಟ್ಟಿವತ್ತಿಗೆಬೇರನ್ನು ನೂರುಹಲ ನೀರಲ್ಲಿ ಕಷಾಯವಿಕ್ಕಿ ಚತುರ್ಭಾಗಾವಶೇಷವಾಗಿ ಕಾಯಿಸಿ ಅದರಲ್ಲಿ ಮೇಲೆ ಎಣ್ಣೆ ಒಂದುಬಳ್ಳ,

కుసువినకుప్ప ఫ్రోందుబళ్ళకునిసి కషాయమాడువాగ అదక్కె -శట్టివ
శ్రీగెబేరు నాల్కు-కులవన్ను అరదు హాకి కదడి కాయిసి కుదదల్లియు
ళువి దినంప్రతి ఉదయకాలదల్లి నాల్కు-వరకుతూకవం సేవిసలు అ
పస్మారశమనవకువు.

(బ్రాహ్మ్యాదిఘృతం.)

శ్లో ॥ బ్రాహ్మీకంస్వరసేద్వ్యముష్టిమధుకేయుక్తేద్ధమాజ్యంతథా।
బ్రాహ్మీకాస్వరసేవయగ్గదవచాశంఖస్యచూర్ణైర్యుతే॥ మూ
త్రేపుంగవబస్తయోర్యదపినా సింధూత్థహింగుప్లుతే।తత్పీత
ప్రీతయంగ్రిష్టేస్సదుకులైకావనాదినాపస్మృతిం ॥

టీ ॥ ఫ్రోందుకొళగ నెల్లికాయిరస, ఫ్రోందుబళ్ళ కుసువినకుప్ప కు
నిసి, యెరడుకుల యష్టిమధుక చూర్ణిసిహాకి, పాకవమాడి కుదద
ల్లియుళువి దినంప్రతి ఉదయకాలదల్లి నాలకువరకుతూకకొడిసలు, గ్రి
కు, భూతే, అపస్మారగళు శమనవకువు. హాగెయే ఫ్రోందుకొళగ ఒం
డెలగనరసదల్లి ఫ్రోందుబళ్ళకుసువిన కుప్పవకునిసి అదరల్లిచంగలకో
ష్ఠ, బజె, శంఖభస్మ, ఈమూరన్ను ప్రత్యేక మూరువరకుతూకవం
చూర్ణిసి హాకి కాయిసి సేవిసలు మొదలహాగె, అదల్లదిద్దరె ఎ
రడుబళ్ళగోమూత్ర యెరడుబళ్ళ ఆడినమూత్ర, యెరడుకూడి ఫ్రో
దుకొళగదల్లి ఒందుబళ్ళకుసువినకుప్పవంకునిసి అదరల్లి సైంధవ, ఇం
గు, ప్రత్యేక ఫ్రోందుకులవం చూర్ణమాడి హాకికాయిసి కుదదల్లి
యళువి, ఆకుప్పవం కొడిసలు మొదలినంతెయే గుణవుంటాగువదు.

(పంచగవ్యఘృత)

శ్లో ॥ గోమయస్వరసక్షీర దధిమూత్రైస్త్రిశ్శృతంహవిః ॥ అప
స్మారగ్రహోన్మాదకామిలాంతకరంపిబేత్ ॥

టీ ॥ కుసువినసగణీరస ఫ్రోందుబళ్ళ, కుసువినహాలుఫ్రోందుబళ్ళ, ఆ
మూత్రఫ్రోందుబళ్ళ, ఆంతూమెల్లా కూడిఫ్రోందుకొళగ, యిదరల్లి
ఫ్రోందుబళ్ళ కుసువినకుప్పవం కునిసి కాయిసిదకుప్పవన్ను దినంప్రతి
నాలకువరకుతూకసేవిసలు అపస్మార, గ్రహ, ఉన్మాద, కామాలే ఇవి

ಸ್ಥೂಲಶಮನವು. **********************************

(ಮಹಾಪಂಚಗವ್ಯಘೃತ.)

ಶ್ಲೋ॥ದ್ವಿಪಂಚಮೂಲಂತ್ರಿಫಲಾದ್ವಿಬಲಾಕುಟಜತ್ವಚಂ।ಸಪ್ತಪರ್ಣಮ
ಪಾಮಾರ್ಗಂನೀಲಿನೀಂಕಟುರೋಹಿಣೀ॥ಶಮ್ಯಾಕಪುಷ್ಕರಜಟಾನಚಾ
ಫಲ್ಗುದುರಾಲಭಾ । ದ್ವಿನಿಶಾಚಜಲದ್ರೋಣೇಪಕ್ತ್ವಾಪಾದಾವಶೇಷಿತೇ॥
ಭಾರ್ಙ್ಗೀಪಾಠಾಢಕೀಕುಂಭನಿಕುಂಭವ್ಯೋಷರೋಹಿಷೈಃ । ಮೂರ್ವಾ
ಚನಿಂಬಪೂತೀಕ ಶ್ರೇಯಸೀಶಾರಿಬಾದ್ವಯೈಃ ॥ ಮದಯಂತ್ಯಾಗ್ನಿ
ನಿಚುಳೈಃಕರ್ಷಾಂಶೈಸ್ಸರ್ಪಿಷಃಪಚೇತ್।ಪ್ರಸ್ಥಂತದ್ವದ್ದ್ರವೈಃಪೂರ್ವೈಃ
ಪಂಚಗವ್ಯಮಿದಂಮಹತ್ ॥ಜ್ವರಾಪಸ್ಮಾರಜಠರಭಗಂಧರಹರಂಪರಂ।
ಶೋಫಾರ್ಶಃಕಾಮಿಲಾಪಾಂಡು ಗುಲ್ಮಕಾಸಗ್ರಹಾಪಹಂ ॥

ಟೀ॥ಬಿಲ್ಲಪತ್ರೆಬೇರು,ನರುವಲಬೇರು,ಶಿವನೀಬೇರು,ಪಾದರಿಬೇರು,ತಿಮ್ಮರದಕೊಕ್ಕೆ, ಗುಳ್ಳದಬೇರು,ನೆಲಗುಳ್ಳದಬೇರು,ಮುರಚೆಲೆಹೊನ್ನೆ,ಮೂರೆಲೆಹೊನ್ನೆ, ನೆಗ್ಗಿಲಬೇರು,ತ್ರಿಫಲೆ,ದೊಡ್ಡಳ್ಳಂಗಡಲೆಬೇರು.ಕಿರುಗಳ್ಳಂಗಡಲೆಬೇರು, ಕೊಡಸೀಗನಕೊಕ್ಕೆ, ಏಳೆಲೆಬಾಳೇಗೆಡ್ಡೆ, ಉತ್ತರಣೆಬೇರು,ನೀಲಿಬೇರು,ಕಟುಕರೋಹಿಣೀ,ಕಕ್ಕೇಬೇರಿನಕೊಕ್ಕೆ, ಪುಷ್ಕರಮೂಲ, ಜಟಾಮಾಂಸೀ, ಬಜೆ, ಕಾಡತ್ತಿಯಬೇರು, ಕುರಂಜಿನಬೇರು, ಅರಿಶಿನ, ಮರದರಿಶಿನ, ಈ ಇಪ್ಪತ್ತೆಂಟು ಔಷಧಿಗಳು ಪ್ರತ್ಯೇಕ ಐದುವರಹತೂಕವಂ ನಾಗಳನೀರಲ್ಲಿ ಕಷಾಯ ಇಕ್ಕಿ, ನಾಲ್ಕುಭಾಗಾವಶೇಷವಾಗಿಕಾಯಿಸಿ, ಆಕಷಾಯದಲ್ಲಿ ಗೋಮಯದ ರಸ ಒಂದುಬಳ್ಳ, ಗೋಕ್ಷೀರ ಒಂದುಬಳ್ಳ, ಗೋವಿನಮೊಸರು ಒಂದುಬಳ್ಳ, ಗೋಮೂತ್ರಒಂದುಬಳ್ಳ, ಇಷ್ಟನ್ನೂಕೂಡಿಸಿ ಪಾಕವಮಾಡುವಾಗ ಅದರಲ್ಲಿ ಹಾಕುವ ಕಲ್ಕದ್ರವ್ಯ—ಗಂಟುಭಾರಂಗಿ, ಅಗುಳಶುಂಠಿ, ಕೊಗರೀಬೇರು, ದಂತಿ, ತಿಗಡೆ, ತ್ರಿಕಟುಕ, ಶಾರಿವಾಣದಬೇರು, ಕುರಟಿಗೆಬೇರು, ಬೇವಿನಬಳನಾರು, ಈಪಸದನಾರು, ಅಳಲೇಕಾಯಿ, ಹಾಗಲ್ಲಿ, ನೆಲಹಾಗಲಿಬೇರು, ಶೇಣುಕ, ಚಿತ್ರಮೂಲ, ಅಬ್ಬಿಬೇರು,ಇವಿಷ್ಟನ್ನೂ ಪ್ರತ್ಯೇಕ ಹಾಲಹುವರಹತೂಕವನ್ನು ಕೂಡಿಸಿಹಾಕಿ ಪಾಕವಮಾಡಿ ಇಂದಗಲ್ಲಿಯಿಟ್ಟು ದಿನಂಪ್ರತಿ ಪುದಯಕಾಲದಲ್ಲಿ ನಾಲ್ಕುವರಹತೂಕದಾಗಭ್ಯ ಜೇಲುಬಲವರಿತು ಕೊಡಿಸಲು ಜ್ವರ, ಅಪಸ್ಮಾರ,ಉದರರೋಗ, ಭಗಂಧರ, ಶೋಫ, ಮೂಲರೋಗ, ಕಾಮಾಲೆ

ಪಾಂಡು, ಗುಲ್ಮ, ಕಾಸ, ಕ್ಷಯ, ಇವಿಷ್ಟೂಶಮನವಹುವು.************

(ಕೂಶ್ಮಾಂಡಘೃತ.)

ಶ್ಲೋ ॥ ಕೂಶ್ಮಾಂಡಸ್ವರಸೇಸ್ಸರ್ಪಿರಷ್ಟಾದಶಗುಣೈಶ್ಶೃತಂ । ಯಷ್ಟಿ
ಕಲ್ಕಮಪಸ್ಮಾರಹರಂಧೀವಾಕ್ಸ್ವರಪ್ರದಂ ॥

ಟೀ॥ ಬೂದಿಗುಂಬಳದಕಾಯಿಯರಸ ಹದಿನೆಂಟುಬಳ್ಳದಲ್ಲಿ ಒಂದುಬಳ್ಳ ಹಸುವಿನತುಪ್ಪವಂಕುನಿಸಿ, ನಾಲ್ಕುಪಲಯಷ್ಟಿಮಧುಕದಚೂರ್ಣವನ್ನು ಆತುಪ್ಪದಲ್ಲಿ ಕಲಸಿ ಪಾಕವಮಾಡ ಹದದಲ್ಲಿಯಿಳುಹಿ ಉಭಯಕಾಲದಲ್ಲಿಸೇವಿಸಲು ಅಪಸ್ಮಾರಶಮನವಹುದು. ಬುದ್ಧಿಕರ, ಸುಸ್ವರವುಂಟಾಗುವದು.

(ಅಪಸ್ಮಾರಕ್ಕೆ ನಸ್ಯ.)

ಶ್ಲೋ ॥ ಶಕೃದ್ರಸೋವಚಾಸಗ್ಯಷ್ಣಿಭಿರಪಿಚಾಂಜನಂನಸ್ಯಂ । ಉನ್ಮಾ
ದಾಪಸ್ಮಾರೇಶಸ್ತಂ ಜಾಮೂತ್ರಪಿಷ್ಟಾಭಿಃ ॥

ಟೀ ॥ ಕೊಡಸೀಗನಚಕ್ಕೆ, ಹಿಪ್ಪಲಿ, ಬಜೆ, ಹಂಗಲಕೋಷ್ಠ, ಯಷ್ಟಿಮಧುಕ, ಯೀಐದನ್ನೂ ಸಮಾಂಶವಾಗಿ ಆಡಿನಮೂತ್ರದಲ್ಲಿ ಸಣ್ಣನಾಗಿಅರದು ಆಡಿನಮೂತ್ರದಿಂದ ನಸ್ಯ, ಅಂಜನಕ್ರಿಯೆಗಳಮಾಡಿಸಲು ಉನ್ಮಾದ. ಅಪಸ್ಮಾರಗಳು ಶಮನವಹುವು.

ಶ್ಲೋ ॥ ತ್ರ್ಯೂಷಣಂಹಿಂಗುಲವಣಂವಚಾಕಟುಕರೋಹಿಣೀ । ಶಿರೀಷನ
ಕ್ತಮಾಲಾಭ್ಯಾಂಬೀಜಂಶ್ವೇತಾಶ್ಚಸರ್ಷಪಾಃ ॥ ಗೋಮೂತ್ರಪಿಷ್ಟೈ
ಶ್ಶ್ಲಕ್ಷ್ಣೈರ್ವರ್ತಿನೇತ್ರಾಂಜನಂಹಿತಂ । ಚಾತುರ್ಥಿಕಮಪಸ್ಮಾರಮುನ್ಮಾ
ದಂಚನಿಯಚ್ಛತಿ ॥

ಟೀ ॥ ಇಂಗು, ಸೈಂಧವಲವಣ, ಬಜೆ, ಕಟುಕರೋಹಿಣಿ, ಬಾಗೇಬೀಜ, ಹೊಂಗೇಬೀಜ, ಬಿಳೀಸಾಸುವೆ, ಯಿಷ್ಟನ್ನೂ ಸಮಾಂಶವಾಗಿ ಗೋಮೂತ್ರದಿಂದರದು ಕುಡಹಮಾಡಿ ನೆರಳಲ್ಲಿಒಣಗಿಸಿ, ಗೋಮೂತ್ರದಿಂದಲಾದರೂ ನಿಂಬೇಹಣ್ಣಿನರಸದಲ್ಲಾದರೂ ತೇದು ಕಣ್ಣಿಗೆಹಚ್ಚಲು ಚಾತುರ್ಥಿಕಜ್ವರ ಉನ್ಮಾದ ಅಪಸ್ಮಾರ ಯಿಷ್ಟೂ ಶಮನವಹುವು.

(ಅಪಸ್ಮಾರಕ್ಕೆ ಧೂಪ.)

ಶ್ಲೋ ॥ ನಕುಲೋಲೂಕಮಾರ್ಜಾರಗೃಧ್ರಕೀಟಾಹಿಕಾಕಜೈಃ । ತುಂ
ಡೈಃಪಕ್ಷೈಃಪುರೀಷೈಶ್ಚಧೂಪಮಸ್ಯಪ್ರಯೋಜಯೇತ್ ॥

ಟೀ॥ ಮೂಸರಿಯಮಲ, ಗೂಗೆಯಗರಿ, ಬೆಕ್ಕಿನಮಲ, ಹದ್ದಿನಗರಿ, ಚೇಳಬಾಲ ಹಾವಿನಪೊರೆ, ಕಾಗೆಗರಿ, ಇವಿಷ್ಟನ್ನೂ ಸಮಾಂಶವಾಗಿ ಕೂಡಿ ಧೂಪವಿಕ್ಕಲು ಭೂತ ಅಪಸ್ಮಾರ ಉನ್ಮಾದಗಳು ಶಮನವಹುವು.

(ಉನ್ಮಾದಾಪಸ್ಮಾರಗಳಿಗೆ ಅಪಥ್ಯ.)

ಶ್ಲೋ॥ ಮತ್ಸ್ಯಮದ್ಯವಿರುದ್ಧಾನ್ನಂ ತೀಕ್ಷ್ಣೋಷ್ಣಂ ಗುರುಭೋಜನಂ। ಅತಿವ್ಯವಾಯಂ ವ್ಯಾಯಾಮಂ ಶೋಕಂ ಕ್ರೋಧಂ ಚ ಲಂಘನಂ ॥ ಅಪಸ್ಮಾರೇತಥೋನ್ಮಾದೇಽಪ್ಯಪಥ್ಯಂ ಕಥ್ಯತೇಬುಧೈಃ॥

ಟೀ॥ ಮತ್ಸ್ಯ, ಮದ್ಯ, ವಿರುದ್ಧಾನ್ನಭೋಜನ, ತೀಕ್ಷ್ಣವಾದ ಆಹಾರ, ಗುರುಭೋಜನ, ಅತ್ಯಂತ ಸ್ತ್ರೀಸಂಗ, ಅತ್ಯಂತ ಸಂಚಾರ, ಶೋಕ, ಕ್ರೋಧ, ಲಂಘನ, ಇವೆಲ್ಲವೂ ಅಪಸ್ಮಾರಕ್ಕೂ ಉನ್ಮಾದಕ್ಕೂ ಅಪಥ್ಯಗಳು.

(ಪಥ್ಯ.)

ಶ್ಲೋ॥ ಪತ್ತೂರಶಾಲಿಗೋಧೂಮಮುದ್ಗಯೂಷಘೃತಾದಿಭಿಃ । ಧಾತ್ರೀಪಟೋಲಕೂಶ್ಮಾಂಡತಂಡುಲೀಯಕವಾಸ್ತುಕಂ ॥ ಕಪಿತ್ಥದಾಡಿಮದ್ರಾಕ್ಷಾಲಘುಪಿತ್ತಹರಾಣಿಚ । ಉನ್ಮಾದೇಚಿತ್ತವಿಭ್ರಂಶೇಽಪ್ಯಪಸ್ಮಾರೇಹಿತಂಸದಾ ॥

ಟೀ॥ ಹೊನ್ನಗನ್ನೆಸೊಪ್ಪು, ಸಣ್ಣಕ್ಕಿಅನ್ನ, ಗೋಧಿ, ಹೆಸರಕಟ್ಟು, ತುಪ್ಪ, ಹಾಲು, ಮೊಸರು, ನೆಲ್ಲೀಕಾಯಿ, ಪಡವಲಕಾಯಿ, ಬೂದಿಗುಂಬಳದಕಾಯಿ, ಚಿಲುಕೀರೆ, ಚಕ್ಕೋತ, ಬೇಲದಹಣ್ಣು, ದಾಳಿಂಬದಹಣ್ಣು, ದ್ರಾಕ್ಷೀಹಣ್ಣು, ಲಘ್ವಾಹಾರ, ಪಿತ್ತಹರವಾದ ಆಹಾರಗಳು, ಇಷ್ಟೂ ಪಥ್ಯವರ್ಗ, ಉನ್ಮಾದಾಪಸ್ಮಾರಂಗಳಲ್ಲಿ ಹಿತ.

(ಭೂತಚಿಕಿತ್ಸೆ.)

ಶ್ಲೋ॥ ಪುರಾಕಾಲವಧೋದ್ಯುಕ್ತಃ ಕಾಲಹಾ ಕ್ರೋಧಮೂರ್ಛಿತಃ । ನಸಜ್ಜದುರ್ಜಯಾನನ್ಯಗ್ರಹಾನ್ಸಂಗ್ರಾಮಮೂರ್ಧನಿ ॥ ತೇಷಾಂದುರಾಸನ್ನೇಶಸ್ಯಶರೀರಾತ್ಕಾಮರೂಪಿಣಃ । ಶತಕೋಟಿವಿಭಾಗೇನ ಗ್ರಸಂತಸ್ಸಚರಾಚರಂ ॥ ವಾಮದಕ್ಷಿಣಭಾಗಾಭ್ಯಾಂ ಸ್ತ್ರೀಣಾಷ್ಟಪುರುಷಾಷ್ಟಕೇ । ಮುಖಬಾಹೂರುಪಾದೇಭ್ಯಷ್ಟಪಕ್ಷೈರ್ಭಿನ್ನಾಷ್ಟಕೇಗ್ರಹಾಃ ॥ ಸೌಮ್ಯಾಸೌಮ್ಯಸ್ವರೂಪಾಶ್ಚ ಲಕ್ಷಣೈಶ್ಚ ಶುಭಾಶುಭೈಃ । ರೂಪಾಣಿ

ಕೇಷಾಮಾದ್ಯಂತಂ ಕರ್ತುಂ ಕೋ ವಾ ಪಟುರ್ಭವೇತ್ ॥ ಸೋತ್ಸಾಹ ಗ್ರಿದಾ
ದೃಶಿದೇವಾದ್ವತ್ತೈಸ್ಸಂಕ್ಷಿಪತಸ್ತುತಾನ್ । ಅಮರಾ ರಾಕ್ಷಸಾ
ನಾಗಾ ಭೂತಾಸ್ಸುರಾಃ ಕೃಶಾಃ ॥ ಗಂಧರ್ವಾಃ ಪಿತರೋ ಹಿಂ
ಸ್ರಾಃ ಪಿಶಾಚಾ ಬ್ರಹ್ಮರಾಕ್ಷಸಾಃ । ವೈನಾಯಕಾಶ್ಚ ಕುಮಾರಾಃ
ನಿಸ್ತೇಜೋಭಸ್ಮಕಾಸ್ತಥಾ ॥ ಪಲಾಪಾಃ ಕಶ್ಮಲಾಶ್ಚೇತಿ ದಶಾಷ್ಟೌ ತೇ ಮ
ಹಾಗ್ರಹಾಃ । ರಮನ್ತಿ ಸ್ವೇಷ್ಟಯಾ ಲೋಕೇ ಕೋಟಿಭಿಸ್ತೈರುಪಸ್ಥಿತೈಃ ॥

ಟೀ ॥ ಪೂರ್ವದಲ್ಲಿ ಈಶ್ವರನು ಕಾಲನನ್ನು ಸಂಹಾರಮಾಡುವ ಸಮಯದಲ್ಲಿ ಕಾಲಾಂತಕನಾದ ಪರಮೇಶ್ವರನು ಕೋಪಾವಿಷ್ಟನಾಗಿ, ಮತ್ತಾರಿಂದಲೂ ಜಯಿಸಲು ಶಕ್ಯವಿಲ್ಲದಿದ್ದ ಗ್ರಹಗಳನ್ನು ಸೃಷ್ಟಿಸಿದನು. ಆಗಲಾಗ್ರಹಗಳು ಪರಮೇಶ್ವರನ ಶರೀರದಿಂದ ಹುಟ್ಟಿದವು, ಅವು ಕಾಮರೂಪಿಗಳಾಗಿರುವು ಅನೇಕ ಕೋಟಿ ವಿಭಾಗದಿಂದ ಈ ಚರಾಚರಗಳನ್ನು ನುಂಗಿಕೊಂಡು ಸಂಚರಿಸುತ್ತಿರುವು. ಪರಮೇಶ್ವರನ ವಾಮಶರೀರಭಾಗದಿಂದ, ಪುರುಷಗ್ರಹಗಳು ಹುಟ್ಟಿದವು, ಇದಲ್ಲದೆ ಮುಖ, ತೋಳುಗಳು, ತೊಡೆಗಳು, ಪಾದಗಳು, ಇವುಗಳಿಂದಲೂ ಅಸಂಖ್ಯಾತವಾದ ಗ್ರಹಗಳು ಹುಟ್ಟಿದವು. ಆಗ್ರಹಗಳು ವರ್ಣಗಳಿಂದಲೂ, ಸಾಮ್ಯಾಸೌಮ್ಯ ಸ್ವರೂಪಗಳಿಂದಲೂ, ಶುಭಾಶುಭಲಕ್ಷಣಗಳಿಂದಲೂ, ನಾನಾರೂಪಿಗಳಾದವು. ಅವುಗಳ ಸ್ವರೂಪವನ್ನು ಆದ್ಯಂತವಾಗಿ ಹೇಳಲಿಕ್ಕೆ ಪರಮೇಶ್ವರನೊಬ್ಬನು ಹೊರತಾಗಿ ಮಿಕ್ಕವನ್ಯಾವನೂ ಸಮರ್ಥನಲ್ಲವು. ಆದಕಾರಣ ಸಂಕ್ಷೇಪದಿಂದ ಹೇಳುತ್ತೇನೆ ಅದೆಂತೆನೆ—ದೇವಗ್ರಹ, ರಾಕ್ಷಸಗ್ರಹ, ನಾಗಗ್ರಹ, ಭೂತಗ್ರಹ, ಅಸುರಗ್ರಹ, ಕೃಶಗ್ರಹ, ಗಂಧರ್ವಗ್ರಹ, ಪಿತೃಗ್ರಹ, ಹಿಂಸ್ರಗ್ರಹ, ಪಿಶಾಚಗ್ರಹ, ಬ್ರಹ್ಮರಾಕ್ಷಸಗ್ರಹ, ವೈನಾಯಕಗ್ರಹ, ಕುಮಾರಗ್ರಹ, ನಿಸ್ತೇಜಗ್ರಹ, ಭಸ್ಮಗ್ರಹ, ಪಲಾಪಗ್ರಹ, ಕಶ್ಮಲಗ್ರಹ, ಮೊಂದು ಗ್ರಹಗಳು ಹದಿನೆಂಟು ತರನಾದ ಜಾತಿಯುಳ್ಳವು, ಮಹಾಗ್ರಹಗಳು ತಮಗೆ ಇಷ್ಟಬಂದಹಾಗೆ ಲೋಕಗಳಲ್ಲಿ ಕೋಟಿಭೇದಗಳುಳ್ಳವಾಗಿ ಕ್ರೀಡಿಸುತಲಿರುವವು.

(ಆಗ್ರಹಗಳಿರುವಸ್ಥಾನ.)

ಶ್ಲೋ ॥ ಆರಾಮೋದ್ಯಾನವಾಪೀಗಿರಿಶಿಖರನದೀತೀರಸಿದ್ಧಾದಿವಾಸಾಃ ।
ಪ್ರಾಸಾದಾಟ್ಟಾಲಶೂನ್ಯಾಲಯಜಲಧಿನದಾಗೋಕುಲಾವರ್ತಕೇಷು ॥

సీమాస్థానశ్మశానప్రేతవనసరిత్ క్షేత్రకూపాదిషునిత్యం। భూమౌ-
భిః తాః ప్రభూతాస్స్మరహరవశగాస్తే గణాస్సంచరంతి॥

టీ ॥ ఉపవనంగళు, ఉద్యానవనంగళు, క్రీడార్థరచితభూమిగళు, ప-
ర్వతకోడుగల్లుగళు, నదీతీరంగళు, పుష్కరిణిగళు, అట్టాళికెగళు,
శూన్యమనెగళు, గుహెగళు, దనదట్టిగళు, నదిగళసంగమగళు, ముళ్ళిగ
ట్టిదస్థళగళు, శ్మశానగళు, ప్రసిద్ధవాద సత్క్షేత్రగళు, భావిగళు, ఇవు
గళల్లినిత్యవూ పరమేశ్వరన అధీనవాదంతహ భూతగణగళు వాసవాగి
రుత భూమియల్లి సంచారమాడువవు.

( గ్రహగళు మనుష్యరన్ను హిడియువదక్కె కారణ. )

శ్లో ॥ పూజోపచారమననాపేక్షమాణావమానాత్ ।గృహ్ణం
తిమానవానేతేవక్ష్యేతేషాంగుణానపి ॥

టీ ॥ గ్రహగళు బలిపూజెయ అపేక్షెయిందలాదరూ కొందుహాక
బేకెంబ ఇచ్ఛెయిందలాదరూ మత్యావమన్ననెయిందలాదరూ మనుష్య
రన్ను హిడియువవు. అవుగళ గుణగళన్ను ముందెహేళువెను.

శ్లో ॥ లుబ్ధంక్రుద్ధంభయార్తం ర్యపితమతిశయం పూర్వవైరా
నుబంధం । నష్టద్రవ్యంవిముక్తం ప్రతిహతమశుచిం ప్రాప్తకాలం
సరోగం ॥ హాసోన్మత్తంకాంతదేహంనిధినిలయశరం కాతరం
భూషితాంగం । కాంతావేశాంతికంతంస్మరమథనగణాస్తేపు
మాంసంగ్రసంతి ॥

టీ ॥ లోభవుళ్ళవనన్నూ, కోపిష్ఠనన్నూ, భయపట్టిరువవనన్నూ,
బహళకుపువుళ్ళాతనన్నూ, అత్యంతదుసిగారనన్నూ, పూర్వజన్మద
వైరవుళ్ళవనన్నూ, ద్రవ్యవన్ను నాశనపడిసువంతావవనన్నూ, స్త్రీయ
గలిదవనన్నూ, అన్యరిందపకరిసల్పట్టవనన్నూ, ఆచారభ్రష్టనన్నూ,
నిందేయువనన్నూ, అశుచియాగిరువవనన్నూ, ఆసన్నమృత్యువాగిరువవన
న్నూ, రోగగ్రస్తనాగియిరువవనన్నూ, బహుఅట్టహాసవుళ్ళాతనన్నూ,
మదాతిందవుళ్ళాతనన్నూ, నిధియంకిత్తాతనన్నూ, తంగెట్టిద్దాతనన్నూ
కటుతమాకుటాద్యలంకారవుళ్ళవనన్నూ, రాత్రియల్లి ఒబ్బనేసంచరిసుత

ರಿಸುವವನನ್ನೂ, ಪುರುಷನನ್ನೂ ಪರಮೇಶ್ವರನ ಅಧೀನವಾದ ಗ್ರಹಂಗಳು ಹಿಡಿಯುವವು.

ಶ್ಲೋ॥ ಶ್ರೀಲಾಭ್ಯಕ್ತಾಂಪ್ರನೂತಾಮಭಿನವಸುರತಾಂಮದ್ಯಮಾಂಸಾಸು ರಕ್ತಾಂ । ನಗ್ನಾಮುತ್ಪಂನಸತ್ವಾಂಸ್ಮರಶರವಿವಶಾಂಸುಪ್ತಮಾನಾಂ ವಿಚಾರ್ತೈಃ ॥ ರಥ್ಯಾಶೃಂಗಾಟಕಸ್ಥಾನುಕುಸುಮಯುಗತಾಂಪುಂಶ್ಚಲೀ ಕಾಂರುದಂತೀ । ಮೇತಾಂತಾಂತಾಂಕಿಚೇತಾಂಸ್ತ್ರೀಯಮಪಿವಿಷಮಾಸು ಪ್ತಾಂಸ್ತಿಸ್ಪೃಶಂತಿ ॥

ಟೀ॥ ಸ್ತ್ರೀಯರುಗಳನ್ನೂ, ಅಭ್ಯಂಗಮಾಡಿಕೊಂಡವಳನ್ನೂ, ಹೆತ್ತಿರುವವಳನ್ನೂ, ನೂತನಸುರತಕ್ರೀಡೆಯುಳ್ಳವಳನ್ನೂ, ಮದ್ಯಮಾಂಸಗಳನ್ನು ಸೇವಿಸುವಂತಾವಳನ್ನೂ, ನಿರ್ವಾಣವಾಗಿಯಿರುವಸ್ತ್ರೀಯನ್ನೂ, ಗರ್ಭಿಣೀ ಸ್ತ್ರೀಯನ್ನೂ, ಮನ್ಮಥೋದ್ರೇಕವುಳ್ಳ ಸ್ತ್ರೀಯನ್ನೂ, ಅತಿಕ್ರೀಡಾಸಕ್ತಿಯಾದಸ್ತ್ರೀಯನ್ನೂ, ಬೀದಿಬೀದಿತಿರುಗುತಿರುವವಳನ್ನೂ, ಚಾಬೀದಿಕೂಡಿದಸ್ಥಳದಲ್ಲಿ ಯಿರುವವಳನ್ನೂ, ಋತುಸಮಯದಲ್ಲಿರುವಸ್ತ್ರೀಯನ್ನೂ, ವ್ಯಭಿಚಾರಾರ್ಥವಾಗಿ ಸಂಚರಿಸುವವಳನ್ನೂ, ಯಾವಾಗಲೂ ಅಳುತಿರುವವಳನ್ನೂ, ಒಬ್ಬಳೇ ಒಂಟಿಮನೆಯಲ್ಲಿರುವವಳನ್ನೂ, ಮಹಾ ಅಂದವಾದ ಶರೀರವುಳ್ಳವಳನ್ನೂ, ವಿಷಮವಾಗಿಯಿರುವ ಸುಪ್ತಕಗ್ರಹಂಗಳು ಸೋಂಕುವವು.

(ಗ್ರಹಂಗಳ ಸ್ವರೂಪ.)

ಶ್ಲೋ॥ ಸೌಮ್ಯೋರಕ್ತಾನನೋಹೃಷ್ಟಃಪ್ರಗಲ್ಭಃಕಟನಶ್ಶುಚಿಃ । ಸ್ವಲ್ಪಮೂತ್ರಪುರೀಷಶ್ಚಧೀಶೋದೇವಗ್ರಹಸ್ಮೃತಃ ॥

ಟೀ॥ ಸೌಮ್ಯನಾಗಿ, ಮುಖಕೆಂಪಾಗಿ, ಹರ್ಷವುಳ್ಳವನಾಗಿ, ಪ್ರೌಢವಾಕ್ಯವುಳ್ಳವನಾಗಿ, ಶುಚಿಯಾಗಿ, ಸ್ವಲ್ಪಮಲಮೂತ್ರವುಳ್ಳವನಾಗಿ ಧಟ್ಟನಾಗಿದ್ದರೆ, ದೇವಗ್ರಹವೆಂದರಿವುದು.

ಶ್ಲೋ॥ ಸ್ವಮಾಂಸಾದಸ್ಸುರಾಸಕ್ತಶ್ಚಪಲಃಪಿಂಗಳೋಶುಚಿಃ । ಶೂನ್ಯಾಲಯರತೋಧೃಷ್ಟೋಬಲವಾನ್ರಾಕ್ಷಸಗ್ರಹಃ ॥

ಟೀ॥ ತನ್ನಮೈಯಮಾಂಸವನ್ನು ತಾನೇಕಚ್ಚಿತಿಂಬುವನು, ಮದ್ಯಪಾನದಲ್ಲಿಯೇ ಪ್ರಿಯವುಂಟಾಗಿರುವನು, ಅಶುಚಿಯಾಗಿರುವನು, ಯಾವಾಗಲೂ ಹಾಳುಮನೆಯಲ್ಲಿಯೇ ಯಿರುವನು, ಧಟ್ಟನಾಗಿ ಮಹಾಬಲವಂತನಾಗಿರುವನು, ಪೀತಿಗೆಯಿದ್ದರೆ

ರಾಕ್ಷಸಗ್ರಹವೆಂದು ತಿಳಿವುದು.**************************

ಶ್ಲೋ॥ ಧೀರಸ್ತ್ಯಾಗೀಮನೋಗಾಮೀರಕ್ತವರ್ಣಾನನೇಕ್ಷಣಃ। ಭೋಗಾಂ
ಭೋಗಂಧವಾಹಾಶೀಕ್ಷ್ಣೈರ್ಮೋಯಕ್ಷಗ್ರಹಃಕೃಮೀ॥

ಟೀ॥ ಧಟ್ಟನಾಗಿರುವಣ, ಶೀಲಶಾಗಿರುವಣ, ತನ್ನಮನಸ್ಸುಬಂದಹಾಗೆ ಸಂಚಾರ ಮಾಡಿಕೊಂಡುಯಿರುವಣ, ಮುಖವುಕಣ್ಣುಗಳುಕೆಂಪಾಗಿ ಸ್ತ್ರೀಸಂಭೋಗದಲ್ಲಿಯೇ ಆಸಕ್ತಿವುಂಟಾಗಿರುವಣ, ವಾಳಾಹಾರವಂಮಾಡಿಕೊಂಡಿರುವಣ, ಕ್ಷಮೆಯುಂಟಾಗಿರುವಣ, ಈಪ್ರಕಾರದಲ್ಲಿಯಿದ್ದರೆ ಯಕ್ಷಗ್ರಹವೆನಿಸಿಕೊಂಬುದು.

ಶ್ಲೋ॥ ಮಧ್ಗಮಾಲ್ಯಪ್ರಿಯೋಸಷ್ಯೋಲಜಷ್ವಿನಗಾಶ್ರಯಃ। ರ
ಕ್ತಾಕ್ಷಸ್ಸಿಂಧುಕೋಯಾರ್ಥೀವಕ್ರೀನಾಗಗ್ರಹೋಮತಃ॥

ಟೀ॥ ಹಾಲಿನಲ್ಲಿಯೂ ಪುಷ್ಪಮಾಲೆಗಳಲ್ಲಿಯೂ ಪ್ರೀತಿಯುಂಟಾಗಿರುವಣ, ನಾಲಿಗೆಯನ್ನಿಡುವಣ, ಓಡಿಹೋಗಿ ಮರವನ್ನೇರುವಣ, ಬೆಟ್ಟಕ್ಕೆ ಓಡಿಹೋಗುವಣ, ಕಣ್ಣುಗಳು ಕೆಂಪಾಗಿರುವಣ, ನದಿಯನೀರಲ್ಲಿಯೇ ಅಪೇಕ್ಷೆಯುಂಟಾಗಿರುವಣ, ವಕ್ರನಾಗಿಯೇ ನಡೆಯುವಣ, ಯಾರೀತಿಯಲ್ಲಿದ್ದರೆ ನಾಗಗ್ರಹವೆಂದರಿವುದು.

ಶ್ಲೋ॥ ಪರಿಹಾಸಪ್ರಿಯೋನಿತ್ಯಂಸಿದಾಗ್ರಹಭೋಜನೆರತಃ। ದುಷ್ಮಾ
ಧಿಕೋಪೀಮವಾಕ್ಯೈಃಕ್ರೋಧೀಭೂತಗ್ರಹಸ್ಸ್ಮೃತಃ॥

ಟೀ॥ ಯಾವಾಗಲೂ ಪರಿಹಾಸವನ್ನೇಮಾಡುವಣ, ಯಾವಾಗಲೂ ಕೂಗಡಿಸುವಣ, ಭೋಜನದಲ್ಲಿ ಪ್ರೀತಿಯುಂಟಾಗಿರುವಣ, ಓಡಿಹೋಗಿ ಮರವನ್ನೇರುವಣ, ಯಾವಾಗಲೂ ದುರ್ಭಾಷೆಯನ್ನೇನುಡಿಯುವಣ, ಮಹಾಕೋಪವುಂಟಾಗಿರುವಣ, ಈಪ್ರಕಾರದಲ್ಲಿದ್ದರೆ ಭೂತಗ್ರಹವೆಂದರಿವುದು.

ಶ್ಲೋ॥ ಕ್ರೂರದೃಜ್ನಿರ್ಭಯೋದೃಪ್ತಃಪ್ರಭೂತಾಶೀಸಪಸ್ಮಯಃ।
ದ್ವಿಜವೈದ್ಯಸುರದ್ವೇಷೀಗರ್ವಾಂಧಶ್ಚಾಸುರಗ್ರಹಃ॥

ಟೀ॥ ಕ್ರೂರದೃಷ್ಟಿಯುಂಟಾಗಿ ಭಯವಿಲ್ಲದೆ ಕೊಬ್ಬಿಆಡುವಣ, ಬಹಳಅನ್ನವನ್ನುಂಬುವಣ, ಐಶ್ವರ್ಯಪಡುವಣ, ಬ್ರಾಹ್ಮಣರುಗಳಲ್ಲಿಯೂ, ವೈದ್ಯರುಗಳಲ್ಲಿಯೂ, ದೇವತೆಗಳಲ್ಲಿಯೂ ದ್ವೇಷವುಂಟಾಗಿರುವಣ, ಗರ್ವದಿಂದಯೇನೇನೂ ಸದ್ದೆಮಾಡದೆಯಿರುವಣ, ಹೀಗೆಇದ್ದರೆ ಆಸುರಗ್ರಹವೆಂದರಿವುದು.

ಶ್ಲೋ॥ ವಿವಿಕ್ತಸೇವೀಶುಷ್ಕಾಂಗೋಭುಭುಕ್ಷುರ್ದಾರುಣಧ್ವನಿಃ। ದಿಕ್ಷು

ಪ್ರಹಾರೀಸೋದ್ವೇಗೋಯುಕ್ತೋಮಾನೀಕೃಶಗ್ರಹಃ ॥

ಟೀ ॥ ಏಕಾಂತಸ್ಥಳದಲ್ಲಿ ವಾಸವಾಗಿರುವನು, ದೇಹಬಣಗಿಹೋಗುವನು, ಭೋಜನದಲ್ಲಿ ಇಚ್ಛೆಯುಂಟಾಗಿರುವನು, ಭಯಂಕರವಾದ ಧ್ವನಿಯುಂಟಾಗಿರುವನು, ನಾನಾದಿಕ್ಕುಗಳಲ್ಲಿ ಸಂಚಾರವುಂಟಾಗಿರುವನು, ಉದ್ಭ್ರಮಿಯಾಗಿ ಒಬ್ಬರ ಸಂಗಡಲೂ ಮಾತನಾಡದೆಯಿರುವನು, ಹೀಗೆಯಿದ್ದರೆ ಕೃಶಗ್ರಹವೆಂದರಿವುದು.

ಶ್ಲೋ ॥ ಗಂಧಮಾಲ್ಯಪ್ರಿಯೋಹೃಷ್ಟೋನೃತ್ತವಾದ್ಯಃಪರೋರತಃ ।
ಗೀತನೃತ್ಯಪರೋರಾತ್ರೌಜ್ಞೇಯೋಗಂಧರ್ವಕಗ್ರಹಃ ॥

ಟೀ ॥ ಗಂಧಮಾಲೆಗಳಲ್ಲಿ ಪ್ರೀತಿಯುಂಟಾಗಿರುವನು, ಯಾವಾಗಲೂ ಸಂತುಷ್ಟನಾಗಿರುವನು, ಕಾಲಿನಲ್ಲಿಪ್ರೀತಿಯುಂಟಾಗಿರುವನು, ನೃತ್ಯಗೀತಗಳಲ್ಲಿ ಪ್ರಿಯವುಂಟಾಗಿರುವನು, ಸ್ತ್ರೀಸಂಗದಲ್ಲಿ ಪ್ರೀತಿಯುಂಟಾಗಿರುವನು, ಹೀಗೆಯಿದ್ದರೆ ಗಂಧರ್ವಗ್ರಹವೆನ್ನಿಸಿಕೊಂಬುದು.

ಶ್ಲೋ ॥ ತಿಲಮಾಷಗುಡಾಕಾಂಕ್ಷೀಪಿತೃಕಾರ್ಯಪರಾಯಣಃ । ಶಾಂ
ತೋಪರಾಹ್ಣಸಂಚಾರೀಸಜ್ಯೋನ್ನವ್ಯಃಪಿತೃಗ್ರಹಃ ॥

ಟೀ ॥ ಎಳ್ಳು, ಉದ್ದು, ಬೆಲ್ಲ, ಇವುಗಳಲ್ಲಿ ಪ್ರೀತಿಯುಂಟಾಗಿರುವನು, ಅಪರಕಾರ್ಯಗಳಲ್ಲಿ ಆಸಕ್ತಿವುಂಟಾಗಿರುವನು, ಶಾಂತನಾಗಿರುವನು, ಪೂರ್ವಾಹ್ಣದಲ್ಲಿಸುಮ್ಮನೆಯಿದ್ದು ಅಪರಾಹ್ಣದಲ್ಲಿಯೇ ಸಂಚಾರಮಾಡುವನು, ಈ ಲಕ್ಷಣವುಂಟಾಗಿದ್ದರೆ ಪಿತೃಗ್ರಹವೆಂದರಿವುದು.

ಶ್ಲೋ ॥ ಪ್ರಲಾಪೀನಿಷ್ಠುರಾಲಾಪೋಭೀಮಶ್ಶೂನ್ಯರತಿಶ್ಶಠಃ । ಮಹಾಗಂ
ಧೀಹ್ಯೋಮಲಿನಸ್ಸ್ಯಾತ್ಪಿಶಾಚಗ್ರಹಪೀಡಿತಃ ॥

ಟೀ ॥ ಪ್ರಲಾಪವುಂಟಾಗಿರುವನು, ನಿಷ್ಠುರಭಾಷೆಯನ್ನಾಡುವನು, ಭಯಂಕರವಾಗಿರುವನು, ಶೂನ್ಯವಾದರತಿಯುಳ್ಳವನಾಗಿರುವನು, ಮಹಾಶುಚಿಯಾಗಿರುವನು, ಹೀಗಿದ್ದರೆ ಬ್ರಹ್ಮರಾಕ್ಷಸಗ್ರಹವೆಂದು ತಿಳಿವುದು.

ಶ್ಲೋ ॥ ಚೀತ್ಕಾರನಿಯುಕ್ತೋದ್ಗಾರೀದೃಷ್ಟಪಾದರಜಾಬಲೀ । ಜಲನೇತ್ರ
ದರ್ಶನಾದುಂತಿಸೂರೋಷ್ಟೈನಾಯಕಗ್ರಹಃ॥

ಟೀ ॥ ಯಾವಾಗಲೂ ಚೀತ್ಕಾರವಂಮಾಡುತ, ಗಜಚರಣವಮಾಡಿಕೊಂಡು, ಕಾಲುಗಳಲ್ಲಿ ಧೂಳುವುಂಟಾಗಿ, ಮಹಾಬಲವುಂಟಾಗಿ, ಹಲ್ಲನೆರನೆರನೆ ಕಚ್ಚುತ, ಶೂರನಾಗಿದ್ದರೆ ವೈನಾಯಕಗ್ರಹವೆಂದು ತಿಳಿವುದು.

ಶ್ಲೋ॥ ಉತ್ಸಂಗಶಯನಾಸಕ್ತಃ ಪಾಂಸುಕ್ರೀಡಾಪರಸ್ಸದಾ। ಸ್ನಿಗ್ಧಪಾ
ಶ್ಯಾಮದೇಹೋತ್ಸಾಹಸ್ಸ್ಯಾತ್ಕುಮಾರಗ್ರಹೋಪಸೃತಃ ॥

ಟೀ॥ ತೊಡೆಯಲ್ಲಿ ಮಲಗಿಕೊಳ್ಳುವದರಲ್ಲಿ ಪ್ರೀತಿಯುಂಟಾಗಿರುವನು, ಸ್ನೇಹ
ಗೂಡಿದ ಮಾತುವುಂಟಾಗಿರುವನು, ಮಹೋತ್ಸಾಹವುಳ್ಳವನಾಗಿರುವನು, ಮೃದ
ಪ್ರಕೃತಿಯುಂಟಾಗಿರುವನು, ಹೀಗಿದ್ದರೆ ಕುಮಾರಗ್ರಹವೆಂದರಿವುದು.

ಶ್ಲೋ॥ ನಿಷ್ಪ್ರಭೋ ವಿಹ್ವಲೋ ವಕ್ತಾ ನಿರ್ನಿಮೇಷಾವಲೋಕನಃ । ನಿರಾಕೃ
ತಭಿಷಗ್ವಾಕ್ಯೋ ನಿಸ್ತೇಜಾಖ್ಯೋ ಗ್ರಹಸ್ಸ್ಮೃತಃ ॥

ಟೀ॥ ದೇಹದಲ್ಲಿ ಕಾಂತಿಕುಂದುವದು, ನುಡಿವುಂಟಾಗಿರುವದು, ಎವೆಹೊ
ಡೆದೆ ದೃಷ್ಟಿಸಿ ನೋಡುವದು, ವೈದ್ಯರುಗಳ ಮಾತನ್ನು ನಿರಾಕರಿಸುವದು, ಹೀಗಿ
ಯಿದ್ದರೆ ನಿಸ್ತೇಜಗ್ರಹವೆಂದರಿವುದು.

ಶ್ಲೋ॥ ತ್ವಗಸ್ಥಿಭೂತೋ ಬಹುಭುಕ್ ಶೀತಾಂಗಸ್ತಿಮಿತೇಕ್ಷಣಃ। ಹಾ
ಸಯುಕ್ತಾಭಿಧಾಯೀ ಚ ನಿರ್ಮತೋ ಭಸ್ಮಕಗ್ರಹಃ ॥

ಟೀ॥ ದೇಹದಲ್ಲಯೆಲ್ಲಿ ನೋಡಿದರೂ ಅಸ್ಥಿಚರ್ಮಮಾತ್ರವೇವುಂಟಾಗಿರುವನು,
ಬಹಳ ಅನ್ನವನ್ನುಂಬುವನು, ಮೈತಣ್ಣಗೆಯಿರುವನು, ಅಡ್ಡಲಾಗಿ ನೋಟವುಂಟಾ
ಗಿರುವನು; ನಗೆಗೂಡಿದ ನುಡಿವುಂಟಾಗಿರುವದು, ಶುಚಿಯಾಗಿರುವದು, ಹೀಗೆಯಿ
ದ್ದರೆ ಭಸ್ಮಗ್ರಹವೆಂದರಿವುದು.

ಶ್ಲೋ॥ ನರ್ತಕಸ್ಸಹಸಾ ಹಾಸೀ ಬಹುವಕ್ತಾ ಪ್ರಭೂತಭುಕ್ । ಶುಷ್ಕಾಂ
ಗೋ ಜೃಂಭಣಪರಃ ಸ್ಯಾತ್ಪ್ರಲಾಪಗ್ರಹಸ್ಥಿತಃ ॥

ಟೀ॥ ಕುಣಿದಾಡುವನು, ಅಡಿಗಡಿಗೆ ನಗುವನು, ಬಹುವಾಗಿ ಹರಟುವನು, ಬಹು
ಅನ್ನವನ್ನುಂಬುವನು, ಮೈಕೆರಿಕೊಂಬುವನು, ಆಕಳಿಕೆಯುಂಟಾಗಿರುವನು,
ಹೀಗಿದ್ದರೆ ಪ್ರಲಾಪಗ್ರಹವೆಂದರಿವುದು.

ಶ್ಲೋ॥ ರಾಗೀ ಪರಾರ್ಥಹೃತ್ಕ್ರುದ್ಧಃ ಸ್ತ್ರೀದ್ರೋಹೀ ಕಲಹಪ್ರಿಯಃ।
ಬಹ್ವಾಶೀ ಭೀಷಣೋ ಲುಬ್ಧಃ ಸ್ತಬ್ಧವಾಕ್ ಕಶ್ಮಲಗ್ರಹಃ ॥

ಟೀ॥ ಅನುರಾಗವುಳ್ಳವನಾಗಿರುವನು, ಪರದ್ರವ್ಯಾಪಹಾರವಂ ಮಾಡುವನು, ಕೋ
ಪಿಷ್ಠನಾಗಿರುವನು, ಸ್ತ್ರೀದ್ರೋಹವುಳ್ಳವನಾಗಿರುವನು, ಕಲಹಪ್ರಿಯನಾಗಿರು
ವನು, ಹೇರಳವಾಗಿ ಅನ್ನತಿಂಬುವನು, ಅತ್ಯಂತಲೋಭವುಂಟಾಗಿರುವನು, ಹೀ
ಗಿದ್ದರೆ ಕಶ್ಮಲಗ್ರಹವೆಂದು ತಿಳಿವುದು.

ಶ್ಲೋ॥ ಅಷ್ಟಾದಶಗ್ರಹಾಶ್ಚೈತೇ ಲಕ್ಷಣೈರುಪದರ್ಶಿತಾಃ । ಲಿಂಗೈರ್ಗ್ರಹಾಣಾಂ ಪರಿಜ್ಞಾಯ ಚಿಕಿತ್ಸಾಂ ಸಮುಪಾಚರೇತ್ ॥

ಟೀ॥ ಹೀಗೆ ಹದಿನೆಂಟು ತೆರದ ಗ್ರಹಗಳ ಲಕ್ಷಣಗಳು ಹೇಳಲ್ಪಟ್ಟವು, ಆ ಲಕ್ಷಣಗಳಿಂದ ಗ್ರಹಗಳ ಜಾತಿಭೇದವನ್ನು ತಿಳಿದು ಆಮೇಲೆ ಚಿಕಿತ್ಸೆಯನ್ನು ಮಾಡುವದು॥

ಶ್ಲೋ॥ ತೇ ಪುನಃ ಪೃಥಕ್ಕೋಟಿಪರಿವಾರಾ ಇತೀರಿತಾಃ । ಮಂತ್ರೀ ಗ್ರಹೇಷು ಸರ್ವೇಷು ಪ್ರತಿಕೂಲಂ ನ ನಾಚರೇತ್ । ಸಮಂತ್ರೀ ಚಾತುರಂ ಹಂತಿ ಕ್ರುದ್ಧಾಸ್ತೇ ಹಿ ಮಹೌಜಸಃ ॥

ಟೀ॥ ಮೇಲೆ ಹೇಳಿದ ಹದಿನೆಂಟು ತೆರದ ಗ್ರಹಗಳು ಬೇರೆ ಬೇರೆ ಕೋಟಿಪರಿವಾರಗಳೊಡನೆ ಕೂಡಿಹವು. ಮಾಂತ್ರಿಕನಾಗಿರುವವನು ಸಮಸ್ತಗ್ರಹಗಳಲ್ಲಿಯೂ ಪ್ರತಿಕೂಲವನ್ನು ಆಚರಿಸಲಾಗದು. ಪ್ರತಿಕೂಲವಂ ಮಾಡಿದ ವೈದ್ಯನು, ಗ್ರಹಗ್ರಸ್ತನಾದ ಪುರುಷನನ್ನು ಕೈಯಿಂದ ಕೊಂದವನಾಗುತ್ತಾನೆ. ಅದಕ್ಕೆ ಕಾರಣವೇನಂದರೆ, ಆ ಗ್ರಹಂಗಳು ಕೋಪಗೊಂಡರೆ ಮಹಾಪರಾಕ್ರಮವುಳ್ಳವುಗಳಾದದರಿಂದ ವಿಪರೀತವನ್ನೇ ಮಾಡುವವು, ಮಿಕ್ಕಾದ ಯಂತ್ರ ತಂತ್ರ ಅಂಜನ ನಸ್ಯಾದಿಗಳನ್ನು ಶಾಸ್ತ್ರದಲ್ಲಿ ಹೇಳಿರುವ ಪ್ರಕಾರ ನೋಡಿಕೊಂಬುದು. ಇಲ್ಲಿ ಗ್ರಂಥವಿಸ್ತಾರದ ಭಯದಿಂದ ಹೇಳಲಿಲ್ಲವು.

(ಅಂಜನನಸ್ಯ.)

ಶ್ಲೋ॥ ಮಹಾನೀಲೀಂ ಸ್ಮಶಾನಸ್ಥಾಂ ನಿಶಾಯಾಂ ತು ಸಮುದ್ಧರೇತ್ । ಸಮ್ಯಕ್ಕೃಷ್ಣಚತುರ್ದಶ್ಯಾಂ ತಸ್ಯಾ ಲಂಕಟುತೈಲಕೈಃ । ಅಂಜಯೇತ್ಸರ್ವಭೂತಘ್ನಂ ಸರ್ವಗ್ರಹನಿವಾರಣಂ ॥

ಟೀ॥ ಸ್ಮಶಾನದಲ್ಲಿರುವ ವಜ್ರನೀಲಿಯನ್ನು ಕೃಷ್ಣಪಕ್ಷದ ಚತುರ್ದಶೀದಿನ ರಾತ್ರಿಯಲ್ಲಿ ತಂದು ಸಾಸುವೆಯೆಣ್ಣೆಯಲ್ಲಿ ತೇದು ಕಣ್ಣಿಗೆ ಹಚ್ಚಲು, ಸಕಲಭೂತಗ್ರಹ ಸಕಲಗ್ರಹಂಗಳೂ ಬಿಟ್ಟು ಹೋಗುವವು.

ಶ್ಲೋ॥ ಕಟುತುಂಬ್ಯರ್ಥತೈಲೇನ ಮೂಲಂ ಚೈವ ಧೂರ್ತಜಂ । ನಿಘೃಷ್ಯ ತತ್ಕೃತಂ ನಸ್ಯಂ ಭೂತಾಪಸ್ಮಾರನಾಶನಂ ॥

ಟೀ॥ ಕೈಸೋರೆಬೀಜದ ತೈಲದಿಂದ ಚಿಪ್ಪೀಬೇರನ್ನು ತೇದು ನಸ್ಯವ ಮಾಡಲು ಭೂತಾಪಸ್ಮಾರಗ್ರಹಗಳು ಶಮನವಹವು.

ಶ್ಲೋ॥ ತಿಲಕ॥ ಕೃಷ್ಣಗರ್ದಭಮೂತ್ರಂ ತು ಪಾಚನೇನ ಘನೀಕೃತಂ । ಮ

ಚುಂದರೀಚೂರ್ಣಯುಕ್ತಂತಿಲಕಂಸರ್ವಭೂತನುತ್ ॥

ಟೀ ॥ ಕಪ್ಪಾದ ಕತ್ತೆಯಮೂತ್ರವನ್ನು ಕಾಯಿಸಿದರೆ ಘಟ್ಟಿಯಾಗುವದು, ಅದರಲ್ಲಿ ಮೂಗಿಲಿಯಚೂರ್ಣವ ಹಾಕಿ ತಿಲಕವನಿಟ್ಟುಕೊಂಡು ಹೋಗಲು ಆತನಮುಖವಂ ಕಂಡರೆ ಬ್ರಹ್ಮರಾಕ್ಷಸ ಮೊದಲಾದ ಗ್ರಹಗಳು ತೊಲಗಿಹೋಗುವವು.

ಶ್ಲೋ ॥ ನಿರ್ಗುಂಡೀರಸಹಿಂಗೋತ್ಥನಸ್ಯಂಚಾಪಸ್ಮೃತಿಂಜಯೇತ್ ॥

ಟೀ ॥ ನಿರ್ಗುಂಡೀಸೊಪ್ಪಿನರಸದಲ್ಲಿ ಹಿಂಗುವಿನನಸ್ಯವ ಮಾಡಿಸಲು ಅಪಸ್ಮಾರ ಶಮನವಹುದು.

ಶ್ಲೋ ॥ ಸರ್ಷಪೋನಿಂಬಪತ್ರಾಣಿಭೂರ್ಜಪತ್ರಂವಚಾಘೃತಂ । ಧೂಪೋವಾಜಿನಖೋಯುಕ್ತಸ್ಸರ್ವಗ್ರಹನಿಬರ್ಹಣಃ ॥

ಟೀ ॥ ಸಾಸುವೆ, ಬೇವಿನಸೊಪ್ಪು, ಭುಜಪತ್ರೆ, ಬಜೆ, ತುಪ್ಪ, ಕುದುರೆಕೊಳಗು, ಇವಿಷ್ಟನ್ನೂ ಸಮಾಂಶವಾಗಿ ಚೂರ್ಣಿಸಿ ಹೊಗೆಯಂ ಹಾಕಲು ಸರ್ವಗ್ರಹಗಳೂ ನಿವಾರಣವಾಗುವವು.

( ಕೃಶಚಿಕಿತ್ಸೆ. )

ಶ್ಲೋ ॥ ಅಶ್ವಗಂಧಾವಿದಾರ್ಯಾದ್ಯಾವೃಷ್ಯಾಶ್ಚೌಷಧಯೋಹಿತಾಃ ॥

ಟೀ ॥ ಹಿರೇಮದ್ದು, ನೆಲಗುಂಬಳ ಮೊದಲಾದ ವೀರ್ಯವೃದ್ಧಿಕರವಾದ ಔಷಧಗಳು ಶರೀರಕ್ಕೆ ಪುಷ್ಟಿಯನ್ನುಂಟುಮಾಡುವವು.

ಶ್ಲೋ ॥ ಸಿತಾಶ್ವಗಂಧಾಪಯಸಾರ್ಧಮಾಸಂಘೃತೇನತೈಲೇನಸುಖಾಂಬುನಾವಾ ॥ ಕೃಶಸ್ಯಪೋಷಾಯಭವೇನ್ನರಸ್ಯ । ಬಾಲಸ್ಯಸಸ್ಯಸ್ಯಯಥಾಸುವೃಷ್ಟಿಃ ॥

ಟೀ ॥ ಹಿರೇಮದ್ದಿನಬೇರನ್ನು, ಹದಿನೈದುದಿನ ತುಪ್ಪದಿಂದಲಾದರೂ, ಎಣ್ಣೆಯಿಂದಲಾದರೂ, ಬಿಸಿನೀರಿಂದಲಾದರೂ, ಸೇವಿಸಲು ಕೃಶವಾದ ಪುರುಷನಶರೀರವು ಯೆಳೇಪೈರು ಮಳೆಯಿಂದ ಹ್ಯಾಗೆ ಅಭಿವೃದ್ಧಿಯನ್ನುಹೊಂದುವದೋ ಹಾಗೆ ಪುಷ್ಟಿಯಹುದು.

ಶ್ಲೋ ॥ ಶುಷ್ಕಸ್ಫಿಗುದರಗ್ರೀವಃಸ್ಥೂಲಪರ್ವಸಿರಸ್ತಥಾ । ಉಚ್ಯತೇತಿ ಕೃಶಸ್ತತ್ರಪ್ರಾಗುಕ್ತೋಬ್ರಹ್ಮಣೋವಿಧಿಃ ॥

ಟೀ ॥ ಪಕ್ಕೆ, ಹೊಟ್ಟೆ, ಕೊರಳು, ಇವಿಷ್ಟೂ ಸಣ್ಣನಾಗಿ ಬತ್ತಿಕೊಂಡಿರುವನು, ಕೈಕಾಲುಗಳ ಬೆರಳುಗಳಸಂಧಿ ದಪ್ಪವಾಗಿರುವನು, ಮೈಯಲ್ಲೆಲ್ಲ ನರಗ

ಶಕ್ತಿಕೊಂಡಿರುವಣ, ಹೀಗೆಯಿದ್ದರೆ ಕೃಶನೆಂದು ಅರಿವುದು, ಅಲ್ಲಿಬ್ರಹ್ಮಣವಿಧಿಯಂ ಮಾಡುವದು.

ಶ್ಲೋ ॥ ಭುಕ್ತ್ವೋತ್ತರಂಪಿಬತಿಯೋಮನುಜಃಕೃಶಾಂಗಃ । ಶಾಲ್ಯಾದಸಿಕ್ಥಘನಶೀತಲದಾಂಯವಾಗುಂ॥ ಕೂಷ್ಮಾಂಡಮಾಂಸದಧಿದುಗ್ಧಘೃತೈಃಕಿಮುಕ್ತೈಃ । ಸಂಸಿದ್ಧಮಾಂಸಲದೃಢಾಂಗಭರೋಭವೇತ್ಸಃ ॥

ಟೀ ॥ ಶರೀರಕೃಶನಾಗಿರುವವನು ಭೋಜನೋತ್ತರದಮೇಲೆ ಸಣ್ಣಕ್ಕಿಯನು ಬೆಷ್ಟು ಹಾಕಿ ಅಟ್ಟಿ ಅಂಬಲಿಯನ್ನಾರಿಸಿ ತೆಗದುಕೊಳ್ಳಲು, ಮೈಬರುವದು, ಹಾಗೆಯೇ ಬೂದಿಗುಂಬಳದಕಾಯಿ, ಮಾಂಸ, ಹಾಲು, ತುಪ್ಪಮೊಸರು, ಇವುಗಳಿಂದ ಮೈಬರುವದು, ಶರೀರದೃಢವಾಗುವದು.

ಶ್ಲೋ॥ ಮತ್ಸ್ಯಾನಿಮಾಂಸಾನಿಪಯಾಂಸಿಸರ್ಪಿರ್ಜಲಾವಗಾಹಾಸುದಶಾಬ್ದಖಂಡಾಃ । ಮನೋನುಕೂಲಾಸ್ಸುಕೃದಸ್ತ್ರಿಯಶ್ಚದ್ರವ್ಯಾದಿಲಾಭೋಪಿಚಪುಷ್ಟಯಂತಿ ॥

ಟೀ ॥ ಮತ್ಸ್ಯಗಳು, ಮಾಂಸಗಳು, ಹಾಲು, ತುಪ್ಪ, ನೀರಲ್ಲಿಮುಳುಗಿ ಆಟ, ಬಿಲ್ಲು, ಕಜ್ಜಾಯ, ಮನಸ್ಸಿಗೆಅನುಕೂಲವಾದ ಸ್ನೇಹಿತರು, ಮನಸ್ಸಿಗೆಅನುಕೂಲವಾದ ಸ್ತ್ರೀಗಳು, ದ್ರವ್ಯಮೊದಲಾದ ಲಾಭಗಳು, ಇವಿಷ್ಟೂ ಮೈಬರುವದಕ್ಕೆ ಕಾರಣವಾಗುವವು.

(ಸ್ಥೂಲಚಿಕಿತ್ಸೆ.)

ಶ್ಲೋ ॥ ಅತಿಸ್ಥೂಲಶರೀರೋದಂತಾಂಕಿಲತೈಲಂಪ್ರಗೇಪಿಬೇತ್ । ಪಿಬೇದಸನಸಾರಸ್ಯಕ್ವಾಥಂವಾಮಧುಸಂಯುತಂ ॥

ಟೀ॥ ಬಹಳಮೈಬಂದಿದ್ದವರಿಗೆ ಎಳ್ಳೆಣ್ಣೆಯಂ ಪ್ರಾತಃಕಾಲಕ್ಕೆ ಮೊದಲೆಕೂಡಿಸುವದು, ದಿನಂಪ್ರತಿ ಈ ರೀತಿಯಲ್ಲಿ ಐದುಹಣಲಕ್ಕೆ ತಕ್ಕಷ್ಟನ್ನು ಕೊಡಿಸಲು ಮೈಕರಗೆಯುವದು, ಅಲ್ಲದಿದ್ದರೆ ಹೊನ್ನೆಮರದಚೆಕ್ಕೆ ಎರಡುಹಣಲಕ್ಕೆ ತಕ್ಕಷ್ಟನ್ನು ಒಂದುಬಳ್ಳನೀರಲ್ಲಿ ಕಷಾಯವಿಕ್ಕಿ ಅಷ್ಟಾವಶೇಷಮಾಡಿ ಜೇನುತುಪ್ಪಬೆರಸಿ ಕುಡಿಯಕೊಡಲು ಮೈಕರಗೆಯುವದು, ಊಟಕ್ಕೆ ಮೊದಲೇ ಕುಡಿಯಕೊಡುವದು.

ಶ್ಲೋ॥ ಮಾಸತ್ರಯಂಪ್ರಭಾತೇದಶಮರಿಚೋಪಿತತಾಂಬೂಲಂ। ಖಾದ್ವಾಸುಶೀತಮಂಭಃಪಿಬತಿಕೃಶಸ್ಸ್ಯಾದ್ಧತಿಸ್ಥೂಲಃ ॥

ಟೀ ॥ ಎರಡುತಿಂಗಳು ಪ್ರಾತಃಕಾಲದಲ್ಲಿ, ಹತ್ತುಮೆಣಸುಸಹಿತ ತಾಂಬೂಲ

ಚೂರ್ಣಮಾಡಿ ಕಣ್ಣೀರು ಪಾನಮಾಡಲು ಅತಿಸ್ಥೂಲವಾದವನು ಕೃಶವಹನು.

ಶ್ಲೋ॥ ವರಾಸನಾಗ್ನಿ ಗಜಪಿಪ್ಪಲೀನಾಂ ಶಾಕಾಗ್ನಿಮಂಥಂ ಮಧುಪಲ್ಲಕಂ । ದ್ವಿರದ ಸ್ಥೂಲಶಿಶೋಪಿ ಪಿಬನ್ಸಾಪ್ತಾಕ್ಕೃಶೋಭವೇತ್ ॥

ಟೀ॥ ತ್ರಿಫಲೆ, ಹೊನ್ನೇಮರದಕೆತ್ತೆ, ಚಿತ್ರಮೂಲ, ತಾಳೀಸಪತ್ರೆ, ಅತಿವಿಷ, ಯಿಷ್ಟನ್ನೂ ಸಮತೂಕ ಯೆರಡುವರಹ ತೂಕವನ್ನು ಒಂದುಬಳ್ಳ ನೀರಲ್ಲಿ ಹಾಕಿ ಅಷ್ಟಾಂಶಶೇಷವಾಗಿ ಕಾಯಿಸಿ ಶೋಧಿಸಿಕೊಂಡು ಜೇನುತುಪ್ಪಬೆರಸಿ ದಿನಪ್ರತಿ ಉದಯಕಾಲದಲ್ಲಿ ಸೇವಿಸಲು ಆನೆಯಗಾತ್ರದ ಶರೀರವಾದಾಗ್ಯೂ ತಿಂಗಳೊಳಗಾಗಿ ಮೈಕರಗಿ ಕೃಶವಹನು.

ಶ್ಲೋ॥ ಕ್ಷೌದ್ರಂ ಜಲೇನ ಸಂಯುಕ್ತಂ ಸ್ಥೂಲಃ ಪ್ರಾತಃ ಪಿಬೇನ್ನರಃ । ಕೃಶೋಭವತಿಯಾತ್ಯಸ್ಯ ಬಲಂ ತಸ್ಯ ನ ನಶ್ಯತಿ ॥

ಟೀ॥ ಜೇನುತುಪ್ಪವನ್ನು ಕಣ್ಣೀರನ್ನು ಬೆರಸಿ ಉದಯಕಾಲದಲ್ಲಿ ದಿನಪ್ರತಿ ಕುಡಿಸಲು ಜೇನುತುಪ್ಪ ಯಾತುದ್ರವ್ಯವಾದ ಕಾರಣ ಶರೀರ ಕರಗಿದರೂ ಬಲ ಕೆಡುವದಿಲ್ಲವು.

ಶ್ಲೋ॥ ದಿನೇದಿನೇ ಕೃಷ್ಣತಿಲಪ್ರಕುಂಚಂ ಸಮಶ್ನತಾಂ ಶೀತಜಲಾನುಪಾನಂ ।
ಕಾರ್ಶ್ಯಂ ಶರೀರಸ್ಯ ಭವತ್ಯನಲ್ಪಂ ದೃಢೀಭವಂತ್ಯಾಮರಣಂ ಚ ದಂತಾಃ ॥

ಟೀ॥ ದಿನಂಪ್ರತಿ ಉದಯಕಾಲದೊಳು ಒಂದುಕಾಲು ಕರೀಯೆಳ್ಳನ್ನು ಭಕ್ಷಣಮಾಡಿ ತಣ್ಣೀರ ಪಾನವಮಾಡಲು ಮೈಬಡವಾಗಿ ಕೃಶವಹುದು. ಮರಣಪರ್ಯಂತ ದಂತಗಳು ದೃಢವಾಗಿರುವು.

ಶ್ಲೋ॥ ವಿಡಂಗಂ ನಾಗರಂ ಕ್ಷಾರಂ ಕಾಲಲೋಹರಜೋ ಮಧು । ಯವಾಮಲಕಚೂರ್ಣಂ ವಾ ಯೋಗೋಽತಿಸ್ಥೌಲ್ಯದೋಷಜಿತ್ ॥

ಟೀ॥ ವಿಡಂಗ, ಶುಂಠಿ, ಯವಕ್ಷಾರ, ಉಕ್ಕಿನಭಸ್ಮ, ಯಿವಿಷ್ಟನ್ನೂ ಜೇನುತುಪ್ಪದಲ್ಲಿ ಉದಯಕಾಲದೊಳು ನಾಲ್ಕುತೂಕ ಸೇವಿಸಲು ಸ್ಥೂಲವಾದಶರೀರ ಕೃಶವಹುದು. ಯವೆ, ನೆಲ್ಲೀಚೆಟ್ಟು, ಯಿವುಗಳನ್ನು ಸಮಾಂಶವಾಗಿ ಚೂರ್ಣಿಸಿ ಜೇನುತುಪ್ಪದಿಂದ ಕೂಡಿಸಲು ಸ್ಥೂಲಶರೀರ ಕೃಶವಹುದು.

(ಅಂತ್ರವೃದ್ಧಿರೋಗದಲ್ಲಿ.)

ಶ್ಲೋ॥ ಪ್ರೋಕ್ಷಾಕಟ್ವಭಯಾಶಿವು ತ್ರಿಫಲಂ ಗಾರಿವಿಷಾಸ್ಥಿರಾಃ । ಹಿಂಗು ಸೌವರ್ಚಲಾಜಾಜಿಯಮಾನಿ ಧಾನ್ಯಚಿತ್ರಕೈಃ । ನಿಶೆಬೃಹತ್ಯಾಹುಪುಷ

ಪಾಠಾಮೂಲಂಚಸಂಯುತಂ । ಏಷಾಂ ಚೂರ್ಣಂ ಮಧುಘೃತಂ ತೈಲಂ
ಚಸದೃಶಾಂಶಕಂ । ಸಕ್ತುಭಿಃ ಷೋಡಶಗುಣೈರ್ಯುಕ್ತಂ ಪೀತಂ ನಿಹಂತಿ
ತತ್ । ಅತಿಸ್ಥೌಲ್ಯಾದಿಕಾನ್ಸರ್ವಾನ್ ರೋಗಾನನ್ಯಾಂಶ್ಚ ತದ್ವಿಧಾನ್ ॥

ಟೀ ॥ ಶುಂಠಿ, ಮೆಣಸು, ಹಿಪ್ಪಲಿ, ಸೊಂಡೇಬೇರು, ಅಳಲೇಕಾಯಿ, ನುಗ್ಗೇಬೇರಿನಹೊಸ್ಕ, ವಿಳಂಗ, ಅತಿಬಜೆ, ಮೂರಿಲೆಹೊನ್ನೆ, ಇಂಗು, ಸೌವರ್ಚಲವಣ, ಜೀರಿಗೆ, ನಾದಕ್ಕಿ, ಕೊತ್ತುಂಬರಿ, ಚಿತ್ರಮೂಲ, ಅರಿಸಿನ, ಮರದರಿಸಿನ, ಗುಳ್ಳ, ನೆಲಗುಳ್ಳ, ನೀರಹುಬ್ಬೆ, ಅಗಳಶುಂಠಿ, ಇವಿಷ್ಟನ್ನೂ ಸಮಾಂಶವಾಗಿ ಚೂರ್ಣಿಸಿ, ಯಾವೊನಾದ ಹದಿನಾರುಮಡಿ ಸತ್ತುವಿಟ್ಟನ್ನು ಬೆರೆಸಿ, ತುಪ್ಪ, ಜೇನುತುಪ್ಪ, ಎಣ್ಣೆ ಇವುಗಳನ್ನು ಸಮವಾಗಿ ಕೂಡಿಸಿ ಅದರಲ್ಲಿ ಆ ಚೂರ್ಣವಂ ಕಲೆಸಿ ಕೊಡಿಸಲು ದೇಹಸ್ಥೌಲ್ಯವೂ ಮತ್ತು ಕೆಲವು ವ್ಯಾಧಿಗಳು ಸಹ ಶಮನವಹವು.

(ನಿದ್ರಾಭಂಗಕ್ಕೆ.)

ಶ್ಲೋ॥ ವಿರೇಕಃ ಕಾಯಶಿರಸೋರ್ವಮನಂ ರಕ್ತಮೋಕ್ಷಣಂ। ಧೂಮಃ ಕ್ಷುತ್ತೃಟ್ತಥಾ ಹರ್ಷಃ ಕ್ರೋಧಮೈಥುನಭೀಶ್ರಮಃ ॥ ಚಿಂತೋತ್ಕಂಠಾಸುಖಾಶಯ್ಯಾ ಸತ್ವಾಚಾರ್ಯಂ ತಮೋಜಯಃ। ರೂಕ್ಷಾನ್ನಂ ಚಹಿತಾನಿದ್ರಾಂ ವಾರಯಂತಿ ಪ್ರಸಂಗಿಣೀ । ಏತೇ ಪಂಚವಿಜ್ಞೇಯಾ ನಿದ್ರಾನಾಶಸ್ಯ ಹೇತವಃ॥

ಟೀ ॥ ವಿರೇಚನ, ವಮನ, ನಸ್ಯ, ರಕ್ತಮೋಕ್ಷಣ, ಹೊಗೆ, ಹಸಿವು, ಬಾಯಾರಿಕೆ, ಹರ್ಷ, ಅತಿಕ್ರೋಧ, ಮೈಥುನ, ಭಯ, ಕೋಪ, ಚಿಂತೆ, ಲವಲವಿಕೆ, ಸೌಖ್ಯವಿಲ್ಲದ ಹಾಸಿಗೆ, ಸತ್ವಗುಣದ ಹೆಚ್ಚಿಗೆ, ತಮೋಗುಣದ ಜಯ, ರೂಕ್ಷಾನ್ನ ಭೋಜನ, ಇವಿಷ್ಟೂ ನಿದ್ರಾಭಂಗಕ್ಕೆ ಕಾರಣ॥

ಶ್ಲೋ ॥ ಕಾಲಶ್ಶೀಲಕ್ಷಯೋ ವ್ಯಾಧಿವೃದ್ಧಿಶ್ಚಾನಿಲಪಿತ್ತಯೋಃ ॥

ಟೀ ॥ ಕಾಲ, ಶೀಲಕ್ಷಯ, ವ್ಯಾಧಿ, ವಾತಪಿತ್ತದ ಹೆಚ್ಚಿಗೆ, ಇವಿಷ್ಟೂ ನಿದ್ರಾನಾಶಕ್ಕೆ ಕಾರಣ॥

ಶ್ಲೋ ॥ ಶೀಲಯೇನ್ಮಂದನಿದ್ರಸ್ತು ಕ್ಷೀರಮಿಕ್ಷುರಸಂ ದಧಿ । ಆನೂಪೌದಕಮಾಂಸಾನಿ ಭಕ್ಷ್ಯಂ ಗೌಡಿಕಪೈಷ್ಟಿಕಂ॥ ಶಾಲಿಮುದ್ಗಾನಿ ಮಾಷಾಶ್ಚ ಕೀಲಾಟೋ ಮಾಹಿಷಂ ದಧಿ । ಅಭ್ಯಂಗೋದ್ವರ್ತನಸ್ನಾನಂ ತಥಾ ಶ್ರವಣಪೂರಣಂ॥ ಚಕ್ಷುಷಸ್ತರ್ಪಣಂ ಲೇಪಶ್ಶಿರಸೋ ವದನಸ್ಯ ಚ । ಪ್ರಭಾತೀಸುರಭಾದಿಶೇ ಸುಖಶಯ್ಯಾಯಿ ಭೋಜಿತಂ; ಸಂವಾಹನಸಂಸ್ಪರ್ಶಸುಖಂ ಚಿತ್ತ

ಶ್ಚಿತ್ರೈರನುಜೀವಿಭಿಃ।ಸರ್ಪಿಃಕ್ಷೀರಾನುಪಾನಂಚಜೀವನೀಯೈಃಶೃತಂಪಿಬೇತ್॥

ಟೀ॥ ನಿದ್ರಾಭಂಗವುಂಟಾದವನಿಗೆ ಕ್ಷೀರಪಾನ, ಕಬ್ಬಿನಹಾಲು, ಮೊಸರು, ಅನೂಪೋದಕಪಾನ, ಮಾಂಸಭಕ್ಷಣಗಳು, ಸಾರಾಯಿ, ಪಿಷ್ಟವಿಕಾರವಾದ ಮದ್ಯ, ಸಣ್ಣಕ್ಕಿ ಓಗರ, ವೃಕ್ಷಗಳಿಂದವುಂಟಾಗುವಮದ್ಯ, ಉದ್ದಿನಭಕ್ಷ್ಯ, ಘಟ್ಟಿಮಜ್ಜಿಗೆ, ಯಮ್ಮೆಮೊಸರು, ಅಭ್ಯಂಗ, ಅಂಗಮರ್ದನ, ಉಷ್ಣಜಲಸ್ನಾನ, ಕಿವಿಗಳಿನಸ್ಯ, ಚಕ್ಷುಸ್ಸಂತರ್ಪಣ, ಚಕ್ಷುಸ್ಸುಗಳಿಗೆಲೇಪ, ಮುಖಕ್ಕೆಲೇಪ, ಪರಿಮಳಯುಕ್ತವಾದಸ್ಥಾನದಲ್ಲಿ ಒಳ್ಳೇಹಾಸಿಗೆ, ತನಗೆಪ್ರಿಯಕರವಾದ ಸೇವಕರಿಂದ ಅಂಗಮರ್ದನ, ಘೃತಪಾನ, ಕ್ಷೀರದೊಡನೆಸೇರಿದ ಜೀವಂತ್ಯಾದಿಗಣದ ಕಷಾಯದಪಾನ, ಇವಿಷ್ಟೂ ಹಿತವಹವು.

(ಅಕ್ಷಿರೋಗಚಿಕಿತ್ಸಾ.)

ಶ್ಲೋ॥ ವಿದಾಹ್ಯಸಾತ್ಮ್ಯಾತಿವಿರುದ್ಧಶೀತ । ಹಾರಾಮ್ಲತೀಕ್ಷ್ಣೋಷ್ಣಗುರುದ್ರವಾನ್ನೈಃ ॥ ತೀಕ್ಷ್ಣೋಷ್ಣಗಂಧಾದಿಕಹಾಸಭಾಷಾ । ಕ್ರೋಧಾತಿಶೋಕೈಃಪ್ರತತೇಕ್ಷಣಾದ್ವಾ॥ಮದ್ಯಾಂಗನಾಧ್ವಾತಿನಿಷೇವಣಾಚ್ಚ।ಮೂರ್ಧಾಭಿಘಾತಾಚ್ಚನಿಶಿಜಾಗ್ರಾಚ್ಚ॥ ಅವಾಕ್ಶಿರಸ್ಕೋರ್ಧ್ವಪ್ರತಶಾಯಿನೋಚ್ಚ। ಜ್ವರೋಪತಾಪಾದೃತುಪರ್ಯಯಾಚ್ಚ ॥ಉಷ್ಣಾಭಿತಪ್ತಸ್ಯಜಲಪ್ರವೇಶಃ। ದೂರೇಕ್ಷಣಾತ್ಸ್ವಪ್ನವಿಪರ್ಯಯಾಚ್ಚ ॥ ಶುಕ್ತಾರನಾಳಾಮ್ಲಕುಲುತ್ಥಮಾಷ । ನಿಷೇವಣಾದ್ವೇಗವಿನಿಗ್ರಹಾಚ್ಚ ॥ ಸ್ವೇದಾದ್ರಜೋಧೂಮನಿಷೇವಣಾಚ್ಚ । ಛರ್ದೇರ್ವಿಘಾತಾದ್ವಮನಾತಿಯೋಗಾತ್ ॥ಬಾಷ್ಪಗ್ರಹಾತ್ಸೂಕ್ಷ್ಮನಿರೀಕ್ಷಣಾಚ್ಚ।ನೇತ್ರೇವಿಕಾರಾಞ್ಜನಯಂತಿದೋಷಾಃ ॥

ಟೀ॥ ವಿದಾಹವುಂಟುಮಾಡುವ ಅಸಾತ್ಮ್ಯಭೋಜನದಿಂದಲೂ, ಅತಿಶೀತಕರವಾದ ಆಹಾರದಿಂದಲೂ, ಅತ್ಯಂತ ವಿರುದ್ಧಾಹಾರದಿಂದಲೂ, ಆಮ್ಲತೀಕ್ಷ್ಣೋಷ್ಣವಾದ ಆಹಾರಗಳಿಂದಲೂ, ತೀಕ್ಷ್ಣೋಷ್ಣವಾದ ಪರಿಮಳವನ್ನೇ ಆಘ್ರಾಣಿಸುವದರಿಂದಲೂ, ಅತ್ಯಂತನಗುವದರಿಂದಲೂ, ಅಧಿಕಮಾತುಗಳಿಂದಲೂ, ಅತಿಕ್ರೋಧದಿಂದಲೂ, ಅತಿಶೋಕದಿಂದಲೂ, ನಿಟ್ಟಿಸಿನೋಡುವದರಿಂದಲೂ, ಸ್ತ್ರೀಸಂಗದಿಂದಲೂ, ಬಹಳವಾಗಿ ದಾರಿನಡೆಯುವದರಿಂದಲೂ, ಶಿರಸ್ತಾಡನದಿಂದಲೂ, ಬಹಳವಾಗಿನೀರಿನಲ್ಲಿ ಮುಳುಗುವದರಿಂದಲೂ, ತಲೆಕೆಳಗಾಗಿ ಮಲಗುವದರಿಂದಲೂ, ಅತ್ಯಂತಯೆತ್ತರವಾಗಿ ಮಲಗುವದರಿಂದಲೂ, ಜ್ವರಸಂತಾಪದಿಂದ

ಲೂ, ಋತುವಿಪರ್ಯಯದಿಂದಲೂ, ಬಹಳ ಬಿಸಿಲಿನಲ್ಲಿ ಹೋಗಿ ನೀರಲ್ಲಿ ಮುಳುಗುವದರಿಂದಲೂ, ನಿದ್ರಾವಿಪರ್ಯಯದಿಂದಲೂ, ಮದ್ಯ, ಅಂಬಿಲಹುಳಿ, ಹುರುಳಿ, ಉದ್ದುಗಳ ಆಹಾರಗಳಿಂದಲೂ, ಮಲಮೂತ್ರಗಳನ್ನು ತಡೆಯುವದರಿಂದಲೂ, ಧೂಳು ಹೊಗೆಗಳ ಸೇವನೆಯಿಂದಲೂ, ವಮನವಂತಡೆಯುವದರಿಂದಲೂ, ಅತ್ಯಂತವಮನದಿಂದಲೂ, ಕಣ್ಣೀರು ತಡೆಯುವದರಿಂದಲೂ, ಸೂಕ್ಷ್ಮಿಸಿನೋಡುವದರಿಂದಲೂ, ವಾತಾದಿದೋಷಗಳಿಂದಲೂ, ನೇತ್ರರೋಗಗಳುಂಟಾಗುವವು.

ಶ್ಲೋ ॥ ಸರ್ವೇಷಾಮಕ್ಷಿರೋಗಾಣಾಮಾದಾವಾಶ್ಚ್ಯೋತನಹಿತಂ । ದೃಕ್ತೋದಕಂಡೂಘರ್ಷಾಶ್ರುದಾಹರಾಗನಿಬರ್ಹಣಂ ॥

ಟೀ॥ ಸಮಸ್ತ ನೇತ್ರರೋಗಂಗಳಲ್ಲಿಯೂ ಆದಿಯಲ್ಲಿ ಆಶ್ಚ್ಯೋತನವಮಾಡಿಸುವದು, ಆಶ್ಚ್ಯೋತನವೆಂಬದು ಓಷಧಿಗಳಂ ಹಾಕಿ ಕಾಯಿಸಿದ ಕಷಾಯವನ್ನು ಧಾರೆಯಾಗಿ ಕಣ್ಣೊಳಗೆ ಹೊತ್ತುಹೊತ್ತಿಗೆ ಬಿಡುವದು, ಆಶ್ಚ್ಯೋತನದಿಂದನೋವು ಮಾಡುವಹಾಗೆ ಇರುವಯುರಿ, ತಿಮಿರ, ಗಾಯ, ನೀರುಸುರಿವುದು, ಪುರಿತ, ಕೆಂಪು, ಇವಿಷ್ಟೂ ಪರಿಹರವಹವು.

ಬಾಹಟದಲ್ಲಿ.—ಶ್ಲೋ ॥ ಆಶ್ಚ್ಯೋತನಮಭಿಷ್ಯಂದೇಯುಂಜೀತೋರ್ಧ್ವಂ ದಿನತ್ರಯಾತ್ ॥

ಟೀ॥ ಆಶ್ಚ್ಯೋತನವಿಧಿಯನ್ನು ಕಣ್ಣಿನಲ್ಲಿನೀರುಸುರಿಯುವದಕ್ಕೆ ತೊಡಗಿದ ಮೂರುದಿನಗಳ ಮೇಲೆ ಪ್ರಯೋಗಿಸುವದು.

ಸಂಗ್ರಹದಲ್ಲಿ.—ಶ್ಲೋ ॥ ತಾಂಬೂಲಚಂಕ್ರಮಣಶಾಕಜಲಾಭಿಷೇಕ । ಪಾನೀಯಮೈಥುನಪರಾಗಬಹುಪ್ರಲಾಪಾನ್ ॥ ತೇಜೋನಿರೀಕ್ಷಣದಿವಾಕರಧೂಮದೀಪ । ನಾತಾನ್ನವಾತುಗದಿನಃಪರಿವರ್ಜಯೇಯುಃ ॥

ಟೀ ॥ ಹೊಸದಾಗಿ ಕಣ್ಣುಬೇನೆಯುಂಟಾದವರು ತಾಂಬೂಲಚರ್ವಣ, ಇತ್ತಅತ್ತಸಂಚಾರ, ಬದನೇಕಾಯಿ ಮೊದಲಾದಶಾಕಗಳು, ನೀರಸ್ನಾನ, ಜಲಪಾನ, ಸ್ತ್ರೀಸಂಯೋಗ, ಧೂಳು, ಹೆಗ್ಗಳವಾದಪ್ರಲಾಪ, ಬಿಸಿಲು, ಸೂರ್ಯಾದಿಗಳ ನೋಟ, ಧೂಪ, ದೀಪ, ಗಾಳಿ, ಇವುಗಳನ್ನು ವರ್ಜಿಸುವದು.

ಶ್ಲೋ॥ ಆದಿತ್ಯಮಗ್ನಿಮಾದರ್ಶಮಾಕಾಶಂಮಾರುತಂರಜಃ। ಪರಿಶೋಗಂಚ ಚಂದ್ರಸ್ಯಧೂಮಂಚಕರವಾಳಕಂ॥ ನಪಶ್ಯೇದ್ದಶ ರಾತ್ರಿಂತುಮೈಥುನಂಪರಿವರ್ಜಯೇತ್ । ವ್ಯಾಯಾಮಮುಚ್ಚೈರ್ಭಾಷಾಂಚದಿವಾಸ್ವಪ್ನಂತಥೈವಚ॥

ಟೀ॥ ಹೊಸದಾಗಿ ಕಣ್ಣುಬೇನೆಯುಂಟಾದವನು, ಸೂರ್ಯನು, ಅಗ್ನಿ, ಕನ್ನಡಿ, ಆಕಾಶ, ಧೂಳಿ, ಚಂದ್ರಮಂಡಲ, ಹೊಗೆ, ಕತ್ತಿಮೊದಲಾದ ಆಯುಧಗಳು, ಇಷ್ಟನ್ನೂ ನೋಡಲಾಗದು, ಋತುದಿನ ಸ್ತ್ರೀಸಂಗವಾಗದು, ದಾರಿನಡೆಯಲಾಗದು, ಕೂಗಿಮಾತನಾಡಲಾಗದು, ಹಗಲುನಿದ್ರೆಯಾಗದು.

ಶ್ಲೋ॥ ವಕ್ಷ್ಯಂತೇ ಚಾಕ್ಷಿರೋಗಾಣಾಂ ಸ್ಥಾನಸಂಖ್ಯಾಃ ಪೃಥಕ್ ಪೃಥಕ್ । ಪಕ್ಷ್ಮಸ್ವೇವ ಚತುರ್ವಿಂಶತ್ ನವ ಸಂಧೌ ತ್ರಯೋದಶ ॥ ಶುಕ್ಲೇ ಕೃಷ್ಣೇ ಪಂಚ ದೃಶೋಸ್ಸಪ್ತವಿಂಶತ್ತಥೋದಿತೇ। ಷೋಡಶೇತ್ಯತ್ರ ಸಂಭೂತಾಶ್ಚತುರ್ನವತಿರಾಮಯಾಃ॥

ಟೀ॥ ನೇತ್ರರೋಗಂಗಳ ಸ್ಥಾನಂಗಳು ಪ್ರತ್ಯೇಕವಾಗಿ ಹೇಳಲ್ಪಡುತವೆ. ಅದೆಂತೆನೆ— ಕಣ್ಣರೆಪ್ಪೆಯಲ್ಲಿ ೨೪, ಕಣ್ಣುಸಂದುಗಳಲ್ಲಿ ೯, ಬಿಳೀಯುವೆಯಲ್ಲಿ ೧೩, ಕರಿಯಾಲಿಯಲ್ಲಿ ೫, ದೃಷ್ಟಿಯಲ್ಲಿ ೨೭, ಕಣ್ಣಿನಲ್ಲಿ ಸರ್ವತ್ರ ೧೬, ಅಂತು ಎಲ್ಲಾ ಕೂಡಿ ೯೪ ನೇತ್ರರೋಗಗಳು.

ತಂತ್ರಾಂತರದಲ್ಲಿ— ಶ್ಲೋ॥ ಕೃಷ್ಣೇ ಪಂಚ ನವೈವ ಸಂಧಿಷು ದಶ ತ್ರೀಣ್ಯತ್ರ ಶುಕ್ಲೇಬಿಲೇ । ಜಾತಾಷ್ಷೋಡಶ ಪಕ್ಷ್ಮಜಾಃ ಖಲು ಚತುರ್ವಿಂಶದ್ದೃಶೋರ್ವಿಂಶತಿಃ ॥ ಸಪ್ತಾಶೇಷಯುತಾಶ್ಚತುರ್ನವತಿರಿತ್ಯಕ್ಷ್ಣೋರಶೇಷಾಮಯಾಃ । ಯೋ ವೇತ್ತಿ ವ್ಯವಹರ್ತುಮೇಷ ವಿದುಷಾಮಗ್ರೇ ಸಮರ್ಥೋ ಭವೇತ್ ॥

ಟೀ॥ ಕರಿಯಾಲಿಯಲ್ಲಿ ೫, ಕಣ್ಣಸಂದುಗಳಲ್ಲಿ ೯, ಬಿಳಿಯಾಲಿಯಲ್ಲಿ ೧೩, ಕಣ್ಣುಗಳಲ್ಲಿ ಎಲ್ಲಾ ಕಡೆಯಲ್ಲಿಯೂ ೧೬, ಕಣ್ಣರೆಪ್ಪೆಯಲ್ಲಿ ೨೪, ದೃಷ್ಟಿಯಲ್ಲಿ ೨೭, ಅಂತೂ ಕೂಡಿ ೯೪ ನೇತ್ರರೋಗಗಳು. ಈ ಸಂಖ್ಯೆಗಳನ್ನು ಯಾವನರಿತಿರುವನೋ ಅವನೇ ವೈದ್ಯರುಗಳ ಮುಂದೆ ಸಮರ್ಥನೆನಿಸಿಕೊಂಬನು.

( ಹೊಸದಾದ ಕಣ್ಣುಬೇನೆಗೆ. )

ಶ್ಲೋ॥ ಮುಷ್ಟಿಮಾತ್ರಂ ಸಮಾದಾಯ ತಿಂತ್ರಿಣೀನಿಂಬಪತ್ರಕಂ । ಕುಮಾರೀದಳಮಧ್ಯಸ್ಥಂ ಪುಟಪಾಕಂ ವಿಧಾಯ ಚ ॥ ಪಶ್ಚಾದಾದಾಯ ನಿಷ್ಪೀಡ್ಯ ತದ್ರಸೇ ತ್ರಿಫಲಾಮಪಿ । ಅಯಃ ಕರಕಬೀಜಂ ಚ ಘರ್ಷಯೇಲ್ಲೇಖ್ಯತಾಂಗಕಂ॥ ತಂ ಲೇಹ್ಯಂ ಲೇಪಯೇತ್ಸಮ್ಯಕ್ ಅಕ್ಷ್ಣೋಸ್ತು ಪರಿತೋ ಮುಹುಃ । ಶೂಲರಾಗಾಸ್ರಸಂಜಾತಮಕ್ಷಿರೋಗಂ ಜಯೇದ್ಧ್ರುವಂ ॥

ಟೀ॥ ಹುಣಸೇಸೊಪ್ಪು ೧ ಪಲ, ಬೇವಿನಚಿಗರು ೧ ಪಲ, ಈ ಎರಡನ್ನೂ ಲೋಳೆಸರದ ಮಟ್ಟೆಯೊಳು ತುಂಬಿ ಮೇಲೆ ಮುಚ್ಚಿ, ಲಘುಪುಟವಿಟ್ಟು ತೆಗೆದು ಅದರಿಂದ

ಸೊಪ್ಪುಗಳಿಂಹಿಂಡಿಕೊಂಡು, ಆರಸದಲ್ಲಿ ತ್ರಿಫಲೆ, ಅರಪುಶಿ, ಬಿಲ್ಲದಬೀಜ-
ಯ್ ೫ ನ್ನು ಸಣ್ಣನಾಗಿಅರದು ಕಣ್ಣಬಳಿಸಿ ಲೇಪನಮಾಡಲು ನೋವು, ಕೆಂ
ಪುನೀರುಸುರಿಯುವದು, ಇವೆಲ್ಲವೂಶಮನವಹುದು.

ಶ್ಲೋ॥ಹರೀತಕೀಂಚರಜನೀಂಜೀರಕಂಶ್ಲಕ್ಷ್ಣಚೂರ್ಣಿತಂ।ಕೃತ್ವಾತಶ್ಯಾ
ಮಜ್ಜಯಾತಂಮೃದುವಸ್ತ್ರೇಣಪೋಟಲೀಂ॥ ದತ್ವಾದಶವಾಬಿಂದೂನ್
ಪೀಡಯೇನ್ನೇತ್ರನಿಕ್ಷಿಪೇ ॥

ಟೀ॥ ಅಳಲೇಕಾಯಿ, ಅರಿಸಿನ, ಜೀರಿಗೆ, ಈಮೂರನ್ನೂ ಸಣ್ಣನಾಗಿಚೂರ್ಣಿಸಿ
ತೊಳೆಸರದ ಹುಳಿಕಿನಲ್ಲಿ ಕಲೆಸಿನಾವಡಿಯಲ್ಲಿ ಪೊಟ್ಟಣವಕಟ್ಟಿಹತ್ತುಹನಿಹನ್ನೆ
ರಡುಹನಿ ಕಣ್ಣಿನೊಳಕ್ಕೆ ಬೀಳುವಹಾಗೆ ಹಿಂಡಿಕೊಳ್ಳಲುಕಣ್ಣುನೀರುಕೀರುವದು.

ಶ್ಲೋ॥ ರಸಾಂಜನಾಭಯಾದಾರ್ವೀಗೈರಿಕೈಸ್ಸೈಂಧವಾನ್ವಿತೈಃ । ಜ
ಲಪಿಷ್ಟೈರ್ಬಹಿರ್ಲೇಪಸ್ಸರ್ವನೇತ್ರಾಮಯಾಪಹಃ॥

ಟೀ॥ರಸಾಂಜನ, ಅಳಲೇಕಾಯಿ,ಮರದರಿಸಿನ, ಕಾವಿಕಲ್ಲು, ಸೈಂಧವ, ಇವನ್ನು
ನೀರಿಂದಅರದು ಬಿಸಿಮಾಡಿ ಹೊರಲೇಪನಮಾಡಿಸಲು ನೋವು ಶಮನವಹುದು.

ಶ್ಲೋ ॥ ಭೃಂಗರಾಜಸ್ಯಮೂಲಂತುಪಿಷ್ಟ್ವಾಜಂಬೀರವಾರಿಣಾ । ಕ
ತ್ವಾಪೋಟಲಿಕಾಂಯುಂಜ್ಯಾನ್ನವನೇತ್ರರುಜಾಪಹಂ ॥

ಟೀ ॥ ಗರಿಗನಬೇರಂ ನಿಂಬೇಹಣ್ಣಿನರಸದಿಂದಅರದು ಪಾವಡೆಯಲ್ಲಿಪೊಟ್ಟಣಕ
ಟ್ಟಿ ಕಣ್ಣಿಗೆಒತ್ತಿಕೊಳ್ಳಲು ವೇದನೆಶಮನವಹುದು.

(ತಂತ್ರಾಂತರದಲ್ಲಿ.)—ಶ್ಲೋ॥ ತಾಂಬೂಲಶಿಗ್ರುಕರವೀರಶಿರೀಷದಂತಿ।
ಶ್ಯಾಮಾದಧಿತ್ಥಸುಮನೋಸುರಸಾರ್ಜಕಾನಾಂ॥ ಪತ್ರೈಕಶೋಮಧು
ಯುತಸ್ಸ್ವರಸೋಂಜನೇನ।ಶೋಫಂನಯನಯೋಸ್ಸಹಸೈವಹಂತಿ॥

ಟೀ॥ ವೀಳ್ಯದೆಲೆ, ನುಗ್ಗೇಸೊಪ್ಪು, ಕಣಿಗಲಯಲೆ, ಬಾಗೇಸೊಪ್ಪು, ಕಟ್ಟವತ್ತಿ
ಗೆಸೊಪ್ಪು, ನೆಲಮಾಗಳಿಸೊಪ್ಪು, ಬೇಲದಸೊಪ್ಪು, ಜಾಜೀಸೊಪ್ಪು,ಮತ್ತೀ
ಸೊಪ್ಪು, ಈಸೊಪ್ಪುಗಳ ಪತ್ರೈಕರಸಗಳನ್ನು ಜೇನುತುಪ್ಪವೆರಸಿ ಕಣ್ಣಿಗೆ
ಯಚ್ಚಲು ಹೊಸದಾದ ಕಣ್ಣಬಿನೆ ಶಮನವಹುದು.

ಶ್ಲೋ॥ ವಾತಪಿತ್ತಕಫಸನ್ನಿಪಾತಜಾಂ। ನೇತ್ರಯೋರ್ಬಹುವಿಧಾಮಪಿವ್ಯ
ಥಾಂ॥ಶೀಘ್ರಮೇವಜಯತಿಪ್ರಯೋಜಿತ।ಶಿಗ್ರುಪಲ್ಲವರಸಸ್ಸಮಾಕ್ಷಿಕಃ।

ಟೀ॥ ನುಗ್ಗೇಸೊಪ್ಪಿನರಸವನ್ನು ಜೇನುತುಪ್ಪವೆರಸಿ ಕಣ್ಣಿಗೆಯಚ್ಚಲು ವಾತಪಿತ್ತ

ಶ್ಲೇಷ್ಮ ತ್ರಿದೋಷದಿಂದಹುಟ್ಟಿದ ಸಕಲನೇತ್ರರೋಗಗಳೂ ಶಮನವಹುವು.

ಶ್ಲೋ॥ ಪಥ್ಯಾಕುಷ್ಠಾಕುಲ್ಯಾಪಾದೋಮರಿಚಂತಯೋರ್ಯುಂಗುಲಿಕಾ। ಶಾ
ಮಾರೀರಿಪ್ಪುಥಿವ್ಯಾಂಪ್ರಥಿತಾನವನಯನರೋಗನಾಶಾಯ ॥

ಟೀ॥ ಅಳಲೇಕಾಯಿ, ಕುಷ್ಠ, ಇವು ಸಮಭಾಗ, ಅವುಗಳ ನಾಲ್ಕರಲ್ಲೊಂದುಭಾಗ ಮೆಣಸು, ಇಷ್ಟನ್ನೂ ನಿಂಬೇಹಣ್ಣಿನರಸದಲ್ಲಿಮರ್ದಿಸಿ ಗುಡುಕುಗಳಮಾಡಿ ನೆಳಲಲ್ಲಿ ಒಣಗಿಸಿ ನಿಂಬೇಹಣ್ಣಿನರಸದಲ್ಲಿತೇಯ್ದುಕಣ್ಣಿಗೆಹಚ್ಚಲು ಹೊಸತಾದನಯನರೋಗಗಳು ಶಮನವಹುದು.

ಶ್ಲೋ॥ ಕುಷ್ಠನಾಗರಯಷ್ಟೀಭಿರ್ನಿಂಬಸ್ವರಸೈಃ ಕೃತಃ। ಸ್ತನ್ಯೇನಾಕ್ಷ್ಯೋ
ತನಂತು ಹ್ಯಾಜ್ಜಮಿದಕ್ಷ್ಣೋರ್ನವಂಗದಂ ॥

ಟೀ॥ ಪಚ್ಚಕುಷ್ಠ, ಶುಂಠಿ, ಯಷ್ಟಿಮಧುಕ, ಈ ಮೂರನ್ನೂ ಸಮಾಂಶವಾಗಿ ನಿಂಬೇಹಣ್ಣಿನರಸದಿಂದ ಮರ್ದಿಸಿ, ಮೊಲೆಹಾಲಲ್ಲಿ ತದಡಿಸ್ವಲ್ಪಸ್ವಲ್ಪವಾಗಿ ಕಣ್ಣಿಗೆಬಿಡಲು ಹೊಸತಾದಕಣ್ಣುಬೇನೆಶಮನವಾಗುವದು.

ಶ್ಲೋ॥ ಕುಷ್ಠಾಕ್ಷಧಾತ್ರೀಫಲಮಜ್ಜಬೀಜೈ। ರ್ದ್ವಿತ್ರ್ಯೇಕಭಾಗೈಃ ವಿದಧೀತ ವರ್ತಿಂ॥
ತಯಾಂಜಯೇದಸ್ರಮತಿಪ್ರವೃದ್ಧಂ ಪಕ್ಷ್ಣೋಃ ಕೇರ್ಕಷ್ಟಸರಪ್ರಕೋಪಂ॥

ಟೀ॥ ಪಚ್ಚಕುಷ್ಠ, ತಾರೇಕಾಯಿಬೀಜದತಿರಳು, ನೆಲ್ಲೀಕಾಯಿಬೀಜದತಿರಳು, ಇಷ್ಟನ್ನೂ ಕ್ರಮದಿಂದ ಒಂದು ಮೂರು ಯೆರಡು ಭಾಗದಲ್ಲಿಕೂಡಿ ನಿಂಬೇಹಣ್ಣಿನ ರಸದಿಂದ ಮರ್ದಿಸಿ, ಗುಡುಕುಮಾಡಿ, ಛಾಯಾಶುಷ್ಕಂಗೈದು, ನಿಂಬೇಹಣ್ಣಿನರಸದಿಂದಲಾದರೂ ಮೊಲೆಹಾಲಿಂದಲಾದರೂ ಕಣ್ಣಿಗೆಹಚ್ಚಲು ಅತ್ಯಂತ ನೋವುಕೂಡಿಕಣ್ಣಲ್ಲಿ ನೀರುಸುರಿವುದು ಶಮನವಹುದು.

ಶ್ಲೋ॥ ಚಿಂಚಾಪತ್ರಸ್ವರಸೇಪರಿಪಿಷ್ಟಾದ್ದೃಷದಿಲವಣಮೃತ್ಸ್ನಾ ಸಾ। ಗು
ಳಿಕೀಕೃತಾರ್ಮಕಂಡೂಶ್ಯಾವ್ಯಧಿಮಂಥಸತಿಮಿರಪಿಲ್ಲಹರೀ ॥

ಟೀ॥ ಹುಣಸೇಸೊಪ್ಪಿನರಸದಲ್ಲಿ ಕಲ್ಲುಪ್ಪಿನೊಳಗಿರುವ ಮಣ್ಣನ್ನುಸಣ್ಣನಾಗಿ ಅರದು ಗುಡುಕುಮಾಡಿ ಮೊಸರುನೀರಿಂದಹಚ್ಚಲು ವ್ರಣ, ತೀಟಿ, ಮಂಜು, ಮಾಂಸಗ್ರಂಥಿ, ಇವಿಷ್ಟೂಶಮನವಹುವು.

(ಕಣ್ಣಲ್ಲಿರುವ ಗ್ರಂಥಿಗೆ.)

ಶ್ಲೋ॥ ರಸಾಂಜನಶಿಲಾಶಂಖಸೈಂಧವೈಃ ಕ್ಷೌದ್ರಸಂಯುತೈಃ। ನೇತ್ರರೋ
ರಂಜಯೇದ್ವೈತ್ರದ್ಯಃ ಕುಕೂಣಕಕುರಂಪರಂ ॥

టీ ॥ రసాంజన, మణిశిలే, శంఖ, సైంధవ, యివన్నూ సమాంశవాగి నింబేహణ్ణినరసదింద మర్దిసి గుడుగు మాడి, జేనుతుప్పదిం యెజ్జలు కణ్ణల్లి కడ్డి కసకాగి గంటుకట్టియిద్దరే శమనవాగువదు.

శ్లో ॥ వృషామ్లవధ్యాజ్యయుతంసతైలం । సక్షౌద్రసింధుంస్వరసిలవణ్యాః ॥ తామ్రేణకంపిబరుశోఫఘృష్య । కుర్యాణకంకణ్ణ కృచ్ఛేవరుంకి ॥

టీ ॥ చన్నాగిశోధిసిద హుళీహుణసేహణ్ణు, మొసరు, తుప్ప, యెణ్ణె, జేనుతుప్ప, సైంధవ, ఇవుగళన్ను సమాంశవాగి యెసగదసొప్పిన రసదల్లి కంచినకణిగిమేలె చొంబినింద లేసాగి మర్దిసి, తామ్రద భరణియల్లియిరిసి కొండు కణ్ణిగె ఇక్కలు కణ్ణల్లియిరువ గ్రంధికరగువదు.

(చంద్రోదయాంజన.)

శ్లో ॥ కర్పూరాబ్దవ వాటికాత్రిఫలికాసింధూత్థతుత్థాంజనం । తార్క్ష్యంపీతకరోహిణీజిమనిశేపుండ్రాహ్వయష్ట్యాహ్వయం ॥ ఫేనంకేశనుషీకటుత్రియగదోలోధ్రంబలాహుంరజః । పిష్ట్వైత్రాణిచభాగసంగరసకేస్సర్పిర్మధుభ్యాంయుతం ॥ పకిల్గంతి కుర్యాణకంసకిమిరంకాచంబశుక్లవ్రణం । నక్తాంధ్యంపటలంచకుంకిసరుసానామ్నాచచంద్రోదయః ॥

టీ ॥ పచ్చకర్పూర, కొడనారెగడ్డె, కవటె, త్రిఫలె, సైంధవ, తుత్థ, రసాంజన, నీలాంజన, గరుడపచ్చె, పీత రోహిణి, శ్రీగంధ, అరిసిన, బిళీకబ్బసక్కరె, యష్టిమధుక, కడలనొరె, మండెకూదలకరి, త్రికటుక, చంగల కోష్ఠ, శాబరలోధ్ర, అరపుడి, ఇవుగళన్ను సమాంశవాగి మాదళదహణ్ణినరసదింద మర్దిసి, గుడుగుమాడి హసువినతుప్ప, జేనుతుప్పగళింద కణ్ణిగెయిక్కసలు, కణ్ణినల్లిరువ గ్రంధి, మంజు, కాచు, బిళపు, వ్రణ, సంజెగణ్ణు, పటల, ఇవుగళెల్లవూ శమనవాగువు. ఇదు చంద్రోదయాంజన.

(చందనాద్యంజన.)

శ్లో ॥ చందనస్త్వైరికలాక్షాజాతీముకులనిశాంబుపిష్టాసా । వ్రణ

ಶುಕ್ಲಘ್ನೀವರ್ತಿಃ ಪ್ರಸಾರಿಣಂಜಯೇತ್ಘುಷರ್ತಿಮಿರಂಚ ॥
ಟೀ ॥ ಶ್ರೀಗಂಧ, ಕಾವಿಕಲ್ಲು, ಅರಳು, ಜಾಜೀಮೊಗ್ಗು, ಇವುಗಳನ್ನು ಹಸೀ ಅರಿಸಿನದರಸದಿಂದಮರ್ದಿಸಿ, ಉಡುಕುಮಾಡಿ ನಿಂಬೇಹಣ್ಣಿನ ರಸದಿಂದಲಾದರೂ, ಮೊಲೆಹಾಲಿಂದಲಾದರೂ, ತೇದು ಕಣ್ಣಿಗೆ ಹಚ್ಚಲು, ವ್ರಣ, ಬಿಳುಪು, ಉಷ್ಣ, ಮಂಜು, ಇವುಗಳು ಶಮನವಹವು. ದೃಷ್ಟಿಪ್ರಸನ್ನವಹುದು.

(ಪ್ರಕಾರಾಂತ್ರಚಂದನಾದ್ಯಂಜನ.)

ಶ್ಲೋ ॥ ಚಂದನಂಸೈಂಧವಂಫೇನಂಕುಕ್ಕುಟಾಂಡಕಪಾಲಕಂ। ಶಂಖಂ ಮುಕ್ತಾಪಿಪ್ಪಲೀಚಸ್ಫಟಿಕಂಕತಕೋಷಣಂ ॥ ಪಕ್ತೈತಸ್ಸರ್ವೈಸ್ಸಮಂತುತ್ಥಂಜಂಬೀರರಸಮರ್ದಿತಂ। ವರ್ತಿರ್ವಾರ್ದ್ರಾಪವರ್ತ್ಯಾಸರ್ವನೇತ್ರಾಮಯಾಪಹಃ ॥
ಟೀ ॥ ಶ್ರೀಗಂಧ, ಸೈಂಧವ, ಕಡಲನಾಲಿಗೆ, ಕೋಳಿಮೊಟ್ಟೆಯಚಾಟಿ, ಶಂಖ, ಮುತ್ತು, ಹಿಪ್ಪಲಿ, ಸ್ಫಟಿಕ, ಚಿಲ್ಲದಬೀಜ, ಯಿವುಗಳು ಸಮಾಂಶ, ಇವುಗಳೆಲ್ಲದರಸಮ ಪಚ್ಚತುತ್ಥ, ಯಿವಿಷ್ಟನ್ನು ನಿಂಬೇಹಣ್ಣಿನರಸದಿಂದ ಮರ್ದಿಸಿ ಉಡುಕುಮಾಡಿ ಹಸಿಯದನ್ನಾದರೂ ಒಣಗಿದನ್ನಾದರೂ ಕಣ್ಣಿಗೆಯಿಕ್ಕಲು ಸಕಲನೇತ್ರರೋಗಗಳೂ ಶಮನವಹವು.

(ನಾಳಿಕೇರಾಂಜನ.)

ಶ್ಲೋ ॥ ದಾರ್ವೀವರಾಮಧುಕಮಂಭಸಿ ನಾಳಿಕೇರೇ । ಪಕ್ತ್ವಾಷ್ಟಭಾಗಪರಿಶಿಷ್ಟರಸಂಪ್ರಾನಸ್ತ ॥ ಕಾಸ್ಯಂದ್ರಂವಿಪಾಚ್ಯಶಶಿಸೈಂಧವಮಾಕ್ಷಿಕಾಢ್ಯಂ । ಯುಂಜ್ಯಾದ್ವ್ರಣಾರ್ಮತಿಮಿರಾದಿಷುಪಿತ್ತಜೇಷು॥
ಟೀ ॥ ಹದಿನಾರುಹಲ ಪ್ರೊಂದುಬಳ್ಳವೆಂಬಲೆಕ್ಕದಿಂದ ಯೆರಡುಬಳ್ಳ ಯೆಳನೀರಲ್ಲಿ ಮರದರಸಿನ, ಅಳಲೇಕಾಯಿ, ನೆಲ್ಲೀಕಾಯಿ, ತಾರೇಕಾಯಿ, ಯಷ್ಟಿಮಧುಕ, ಈ ಐದನ್ನೂ ಪ್ರತ್ಯೇಕ ಯೇಳುವರಹ ತೂಕಗಳನ್ನು ಜಜ್ಜುಕುಟ್ಟಿ, ಯೆರಡು ರಾತ್ರಿ ಒಂದು ಭಾಂಡದಲ್ಲಿಯಿರಿಸಿ, ಮೂರುದಿನ ಎಂಟುಭಾಗಾವಶೇಷವಾಗಿ ಕಾಯಿಸಿ, ಆ ಕಷಾಯವನ್ನು ಯಿಂಮಡಿಸಿದ ಘಟ್ಟಿಪಾವಡೆಯಿಂದ ಶೋಧಿಸಿ, ಆ ಕಷಾಯವನ್ನು ಎಂಟುಭಾಗಾವಶೇಷವಾಗಿ ಮಂದಾಗ್ನಿಯಿಂದ ಕರಹತ್ತದಹಾಗೆ ಕಾಸುವುದು, ಅದರಲ್ಲಿ ಪಚ್ಚಕರ್ಪೂರ ಹೊನ್ನುತೂಕ, ಸೈಂಧವಹೊನ್ನುತೂಕ, ಈ ಎರಡನ್ನೂ ಸೂಕ್ಷ್ಮವಾಗಿಚೂರ್ಣಿಸಿ ಹಾಕಿ ಇಳುಹಿ

ಟನ್ನಾಗಿ ಸಮರಸವಾಗುವಂತೆ ತೊಳಸಿ ಸ್ವಲ್ಪ ಆರಿದಮೇಲೆ ಶೋಧಿಸಿದ ಜೇನುತುಪ್ಪವನ್ನು ಯೆಂಟುವರಹತೂಕವನ್ನಾದರೂ ತನ್ನ ಮನಸ್ಸಿಗೆ ಸರಿಬರುವಷ್ಟಾಗಾದರೂ ಔಷಧಕ್ಕೆ ಬೇಕಾದಷ್ಟನ್ನು ಕೂಡಿಸಿ, ಬೆಳ್ಳಿಭಾಜನದಲ್ಲಿ ಯಿರಿಸಿಕೊಂಡು, ಕಣ್ಣಿಗೆ ಮೆಚ್ಚಲು ಹುಣ್ಣುಗಣ್ಣು, ರಕ್ತಗಣ್ಣು, ಪಿತ್ತದೋಷ ಮೊದಲಾದ ಸಮಸ್ತನೇತ್ರರೋಗಂಗಳೂ ಶಮನವಹವು.

( ಸುನೇತ್ರಾಂಜನ. )

ಶ್ಲೋ॥ ಫಲತ್ರಯಂ ಚಾಪಿ ಕಟುತ್ರಯಂ ಚ । ಜ್ಯೋತಿಷ್ಮ ಕಾರಂಜಫಲಂ ಗಬೀಜಂ ॥ ಪ್ರಪೌಂಡರೀಕಂ ಮಧುಕಂ ಸತಾಮ್ರಂ । ಸಿಂಧೂದ್ಭವಂ ಚ ಸ್ಫಟಿಕಂ ಸಶಂಖಂ ॥ ರಸಾಂಜನೇ ಗೈರಿಕಚಂದನೇ ದ್ವೇ। ದ್ರಾಕ್ಷಾ ನಿಶಾ ಶಾಬರಲೋಧ್ರಕಂ ಚ ॥ ತುತ್ಥಂ ಚ ಪೀತಾಹ್ವಯರೋಹಿಣೀ ಚ । ಪಿಷ್ಟ್ಯಂ ಕರಂಜಸ್ಯರಸೇನ ಸರ್ವಂ ॥ ತುತ್ಥಾದಿಭಾಗೋ ದ್ವಿಗುಣೋ ವಚಾಃ । ಪ್ರಪೌಂಡರೀಕಾದಿಗಣಸ್ತ್ರಿಭಾಗಃ ॥ ಶೇಷಂ ಚ ತುಲ್ಯಾಂಶಮಿಯಂ ನಿಹನ್ಯಾ ದ್ವರ್ತಿಸ್ಸುನೇತ್ರಾ ಸಕಲಾಕ್ಷಿರೋಗಾನ್ ॥ ಕಾಚಂ ಸಪುಷ್ಪಂ ಪಟಲಂ ವ್ರಣಂ ಚ । ಶೋಫಂ ಚ ಕಂಡೂಂ ತಿಮಿರಂ ಚ ಶುಕ್ಲಂ ॥ ಸ್ರಾವಂ ಚ ದಾಹಂ ಚ ಶಾಂಧತಾಂ ಚ । ತಥಾಕ್ಷಿರಾಗಂ ಚ ನಿಹಂತಿ ಶೀಘ್ರಂ ॥

ಟೀ॥ ಪಚ್ಚೆತುತ್ಥ, ಐಶರೋಹಿಣಿ, ಈ ಯೆರಡೂ ಪ್ರತ್ಯೇಕ ವರಹತೂಕ, ಬಜೆ, ರಸಾಂಜನ, ನೀಲಾಂಜನ, ಕಾವಿಕಲ್ಲು, ಶ್ರೀಗಂಧ, ರಕ್ತಚಂದನ, ದ್ರಾಕ್ಷೇಹಣ್ಣು, ಅರಿಸಿನ, ಶಾಬರಲೋಧ್ರ, ಯಿವೊಂಭತ್ತೂ ಪ್ರತ್ಯೇಕ ೨ ವರಹತೂಕ, ಪ್ರಪೌಂಡರೀಕ, ಯಷ್ಟಿಮಧುಕ, ತಾಮ್ರ, ಸೈಂಧವ, ಸ್ಫಟಿಕ, ಯೀಆರೂ ಪ್ರತ್ಯೇಕ ೩ ವರಹತೂಕ, ಅಳಲೇಕಾಯಿ, ನೆಲ್ಲೀಕಾಯಿ, ತಾರೇಕಾಯಿ, ಶುಂಠಿ, ಮೆಣಸು, ಹಿಪ್ಪಲಿ, ನಸುಗುನ್ನಿಬೀಜ, ಹೊಂಗೇಬೀಜ, ವಾಯುವಿಳಂಗ, ಈ ಒಂಭತ್ತೂ ಪ್ರತ್ಯೇಕ ೧ ತೂಕ, ಯಿಷ್ಟನ್ನೂ ಹೊಂಗೇಗೋಳ ಸಾರಿನ ಕಷಾಯದಿಂದ ಮರ್ದಿಸಿ, ಗುಳುಗುಗಳ ಮಾಡಿ, ಛಾಯಾಶುಷ್ಕಂಗೈಯು, ಕಣ್ಣಿಗೆ ನಿಂಬೇಹಣ್ಣಿನರಸದಿಂದ ಮೆಚ್ಚಲು, ಕಾಚದೋಷ, ಕಣ್ಣಪೂವು, ಪೊರೆ, ವ್ರಣ, ಕಣ್ಣತಿನೆ, ಕೀಚು, ದೃಷ್ಟಿಮಾಂದ್ಯ, ಬಿಳುಪು, ಕಣ್ಣನೀರು, ಉರಿತ, ಸಂಜೆಗಣ್ಣು, ಕುಮಾಂಸವೃದ್ಧಿ, ಇವಿಷ್ಟೂ ಪರಿಹರವಹವು.

(ಕರಂಜಾದ್ಯಂಜನ.)

ಶ್ಲೋ ॥ ಕರಂಜಶಿಗ್ರುನಿಂಬಾನಾಂಮಜ್ಜಾಕೇಶಮಷೀಃಪೃಥಕ್ ।ದ್ವಿಪಂಚ ಮಜ್ಜಾಶಿಗ್ರಸ್ಥಾಯಾಃಪಿಶಾಚೀತುಮಷೀತಥಾ ॥ ಅಷ್ಟನಿಷ್ಕಂತುತಾಂ ಮ್ರಂಸ್ಯಾತ್ ಶರ್ಕರಾಸಪ್ತನಿಷ್ಕಕಂ । ಷಣ್ಣಿಷ್ಕಂತುದ್ರಿಶುಬುಕಂ ಪಂಚನಿಷ್ಕಂಮುರುಂಡಕಂ॥ಕಪಾಲಶಂಖಕಂಕಂಸವೃತಿಕುಷ್ಠಂಪೃಥಕ್ ಪೃಥಕ್ । ತ್ರಿನಿಷ್ಕಮಂಜನೀಕುಷ್ಠಚಂದನೇಪೀತರೋಹಿಣೀ ॥ ಮಾಗಧೀ ಕೃಷ್ಣಸರ್ಪಾಸ್ಥ್ಯಾಕ್ ದ್ವಿನಿಷ್ಕಂಸ್ಯಾತ್ ಪೃಥಕ್ ಪೃಥಕ್ । ತ್ರಿಪಾದೀಶ್ವೇತ ಪೂಲಾಸಪುನರ್ನವಶಿಫಾರ್ಜುಟಾಃ॥ಪದ್ಮಶಾಕ್ವರಮತ್ಸ್ಯಾಕ್ಷಿನೀಲೀಪೃ ಥಕಲೋಧ್ರಕಂ । ಪಾದೋನನಿಷ್ಕದ್ವಿತಯಂಪ್ರತ್ಯೇಕಂಚಾಯಸಂ ರಜಃ ॥ ದಾರ್ವೀಮನೋಹ್ವಾಕಾಂತಾರಕುಕ್ಕುಟಾಂಡಕಪಾಲಕಂ । ಸಾರಂಗಶೃಂಗಂಗೋದಂತಂಸೈಂಧವಂಕೂರ್ಮಪೃಷ್ಠಕಂ ॥ ಖರದಂ ತಂವ್ಯಾಘ್ರನಖಂಕರ್ಷಾರ್ಧಂಚಪೃಥಗ್ಭವೇತ್ । ಪ್ರವಾಳಯುಕ್ತಾಕ ನಕರೌಪ್ಯಂನಿಷ್ಕಂಪೃಥಗ್ಭವೇತ್ ॥ ತ್ರಿಫಲಾತಾಳಜಂಬೀರಧಾನ್ಯಾಮ್ಲ ವಶಿರಾಂಭಸಿ । ಪೃಥಗ್ದಿನತ್ರಯಂಪಿಷ್ಟ್ವಾಛಾಗದುಗ್ಧೇದಿನತ್ರಯಂ ॥ ತತ ಸ್ತಾಮ್ರಕುಸಂಲಿಪ್ತಾವರ್ತಿಃಛಾಯಾವಿಶೋಷಿತಾ । ಸ್ಯಂದಾರ್ಮತಿಮಿ ರಾಂಧ್ಯೇಷುಸ್ತೈಮಿರ್ಯಪಟಲಾದಿಷು॥ಶುಕ್ರಾಣಿವರ್ತ್ಮರೋಗೇನಕ್ತಾಂ ಧ್ಯೇಜಾಲಿಮಂಡಲೇ । ಷಣ್ಣವತ್ಯಕ್ಷಿರೋಗೇಷುಹಿತಂಸುಶ್ರುತಪೂಜಿತಂ ॥

ಟೀ ॥ ಹೊಂಗೇಬೀಜದತಿರುಳು, ನುಗ್ಗೇಬೀಜದತಿರುಳು, ಬೇವಿನಬೀಜದತಿರುಳು, ಮಂ ಡೆಕೂದಲಕರಿ, ಈ ೪ ಪ್ರತ್ಯೇಕ ೧೦ ತೂಕ, ಅಳಲೇಕಾಯಿತಿರುಳು, ನೆಲ್ಲೀಕಾ ಯಿತಿರುಳು, ತಾರೇಕಾಯಿತಿರುಳು, ಹೆಗ್ಗಬ್ಬಿನಮಷೀ, ಈ ೪ ಪ್ರತ್ಯೇಕ ೮ ತೂ ಕ, ತಾಮ್ರ, ರಾಯಿಪುಡಿಶರ್ಕರೆ, ಈ ೨ ಪ್ರತ್ಯೇಕ ೭ ತೂಕ, ಗುಳಿಘ್ರೋಡು ೬ ವರಹಾತೂಕ, ಮುರುಂಡ ೫ ತೂಕ, ಮನುಷ್ಯರತಲೆಬ್ರೋಡು, ಶಂಖ, ಕಂಚಿ ನಭಸ್ಮ, ಪಚ್ಚೆಕುಷ್ಠ, ಈ ೪ ಪ್ರತ್ಯೇಕ ೩ ತೂಕ, ರಸಾಂಜನ, ನೀಲಾಂಜನ, ಕೋ ಷ್ಠ, ಶ್ರೀಗಂಧ, ರಕ್ತಚಂದನ, ಪೀತರೋಹಿಣಿ, ಹಿಪ್ಪಲಿ, ಕಾಳಿಂಗಸಾಗರ ಸೋಲೆ, ಈ ೮ ಪ್ರತ್ಯೇಕ ೨ ತೂಕ, ಚಿನ್ನದಾರೆ, ಬಿಳೀಕೂಲಿಬೇರು, ಬಿಳೀ ಕೊಮ್ಮೆಬೇರು, ಕಿರುನೆಲ್ಲೀಬೇರು, ತಾವರೆಕೇಸರ, ಎತ್ತಿನನಾಲಿಗೆಬೇರು, ಹೊ ನ್ನಗನ್ನೆಬೇರು, ನೀಲೀಬೇರು, ಲಾಮಂಚ, ಲೋಧ್ರ, ಈ ೧೦ ಪ್ರತ್ಯೇಕ ಕಾಲು

ಕಡಮೆ ೨ತೂಕ, ಕಬ್ಬಿಣದಪುಡಿ, ಮರದರಿಸಿನ, ಮಣಿಶಿಲೆ, ಕಾಡಕೋಳಿಯಮೊಟ್ಟೆಯ ಹಾಟೆ, ಸಾರಗನಕೊಂಬು, ಹಸುವಿನಕಲ್ಲು, ಸೈಂಧವ, ಆಮೆಬೆನ್ನ ಹಾಟೆ, ಕತ್ತೆಕಲ್ಲು, ಹುಲಿಯುಗರು, ಈ ೧೦ ಪ್ರತ್ಯೇಕ ೩ ತೂಕ, ಹವಳ, ಮುತ್ತು, ಚಿನ್ನ, ಬೆಳ್ಳಿ, ಈ ೩ ಪ್ರತ್ಯೇಕ ೧ ತೂಕ, ಈ ೧೩ ಔಷಧಿಗಳನ್ನು ತ್ರಿಫಲೆ ಕಷಾಯದಲ್ಲಿ ೩ ಮರ್ದನೆ, ಬ್ರಾಹ್ಮೀರಸದಲ್ಲಿ ೩ ಮರ್ದನೆ, ಗಜಪಿಪ್ಪಲಿ ಕಷಾಯದಲ್ಲಿ ೩ ಮರ್ದನೆ, ಅಂಬಲಿಯಲ್ಲಿ ೩ ಮರ್ದನೆ, ನಿಂಬೇಹಣ್ಣಿನರಸದಲ್ಲಿ ೩ ಮರ್ದನೆ, ಆಡಿನಹಾಲಿನಲ್ಲಿ ೩ ಮರ್ದನೆ, ಯೀ ರೀತಿಮರ್ದಿಸಿ, ಹುಡುಕುಗಳಂ ಮಾಡಿ, ಛಾಯಾಶುಷ್ಕ ಮಾಡಿ. ನಿಂಬೇಹುಳಿ, ಮೊಲೆಹಾಲು, ಜೇನುತುಪ್ಪಗಳಿಂದ ಕಣ್ಣಿಗೆಯೆಚ್ಚಲು, ಸಮಸ್ತನೇತ್ರರೋಗಗಳೂ ಶಮನವಹವು.

ಶ್ಲೋ॥ ಶಂಬೂಕಂವಾವರಾಟಂವಾದಗ್ಧಂಸೂಕ್ಷ್ಮಾಂಶಚೂರ್ಣಿತಂ।
ಅಂಜಯೇನ್ನವನೀತೇನಹಂತಿಪುಷ್ಪಂಚಿರಂತನಂ ॥

ಟೀ॥ ಸುಣ್ಣೇವಾಟೆಯನ್ನಾದರೂ, ಕವಡೆಗಳನ್ನಾದರೂ, ಭಸ್ಮಮಾಡಿ ಸೂಕ್ಷ್ಮವಾಗಿ ಚೂರ್ಣಿಸಿ ವಸ್ತ್ರಗಳಿತವಮಾಡಿ, ಹಸುವಿನಬೆಣ್ಣೆಯಲ್ಲಿ ಕಂಚಿನತಳಿಗೆಮೇಲೆ ಚೊಂಬಿನಿಂದ ಮರ್ದಿಸಿ ಕಣ್ಣಿಗೆಯೆಚ್ಚಲು ಬಹುಕಾಲದ ಹೂವು ಹರಿದುಹೋಗುವದು.

ತಂತ್ರಾಂತರದಲ್ಲೀ.—ಶ್ಲೋ॥ ಫೇನಂಕುರಂಡಂಕತಕಸ್ಯಬೀಜಂ। ಪುಂಸಃ
ಕಪಾಲಂಸಕುಕ್ಕುಟಾಂಡಂ॥ ಮನಶ್ಶಿಲಾಮಾಕ್ಷಿಕಸಂಪ್ರಯುಕ್ತಾಂ।
ಆಜನ್ಮಜಾತಂಕುಸುಮಂನಿಹಂತಿ ॥

ಟೀ॥ ಕಡಲನಾಲಿಗೆ, ಶಂಖ, ಚಿಲ್ಲದಬೀಜ, ಮನುಷ್ಯರತಲೆಪ್ರೋಟೆ, ಕಾಡಕೋಳಿಯಪ್ರೋಟೆ, ಮಣಿಶಿಲೆ, ಇವುಗಳನ್ನು ಸಮಾಂಶವಾಗಿಚೂರ್ಣಿಸಿ ನಿಂಬೇಹಣ್ಣಿನರಸದಿಂದ ಲೇಸಾಗಿಮರ್ದಿಸಿ, ಹುಡುಕುಗಳಮಾಡಿ, ಛಾಯಾಶುಷ್ಕವಂ ಮಾಡಿ, ಜೇನುತುಪ್ಪದಿಂದತೇದು ಕಣ್ಣಿಗೆಯೆಚ್ಚಲು ಜನ್ಮಪ್ರಭೃತಿವುಂಟಾದಕಣ್ಣಹೂವು ಹರಿದುಹೋಗುವದು.

ಶ್ಲೋ॥ ಕುಕ್ಕುಟಾಂಡಸಫೇನಸುಶಂಖಂ। ಶಿಗ್ರುಬೀಜಮಪಿಸೈಂಧವ
ಯುಕ್ತಂ॥ ಶಿಗ್ರುಪತ್ರಜರಸೇನಸುಮರ್ದ್ಯಂ। ಚಾಂಜಯೇತ್ಸಮಧು
ಹಂತಿಚಪುಷ್ಪಂ॥

ಟೀ॥ ಕಾಡಕೋಳಿಯಮೊಟ್ಟೆ, ಕಡಲನಾಲಿಗೆ, ಶಂಖಭಸ್ಮ, ನುಗ್ಗೆಬೀಜದ ತಿರುಳು, ಸೈಂಧವ, ಇವುಗಳನ್ನು ಸಮಾಂಶವಾಗಿ ನುಗ್ಗೇಸೊಪ್ಪಿನರಸದಲ್ಲಿ ಮ

ರ್ದಿಸಿ, ಜೇನುತುಪ್ಪದಿಂದ ಕಣ್ಣಿಗೆ ಹಚ್ಚಲು ಕಣ್ಣುರಿಯುವುದು ಹೋಗುವದು.

ತಂತ್ರಾಂತರದಲ್ಲಿ.—ಶ್ಲೋ ॥ ಚಂದನಂ ಸೈಂಧವಂ ಪಥ್ಯಾಪಲಾಶತರುಶೋಣಿತಂ । ಕ್ರಿಮವೃದ್ಧಮಿದಂ ಚೂರ್ಣಂ ಜಂಬೀರರಸಮರ್ದಿತಂ ॥ ವರ್ತಿಂ ಕೃತ್ವಾ ವಿಧಾಯಾಶು ಛಾಯಾಶುಷ್ಕಾಂ ಚ ತ್ರೈಕುಚ್ಛ್ರೈಃ । ರಕ್ತೈರ್ವಾ ಮಧುನಾ ಜಿಹ್ವ್ಯಾಷ್ಟುಕ್ಲಾಮಾದಿವಿಲೇಪನಂ ॥

ಟೀ ॥ ರಕ್ತಚಂದನ, ಸೈಂಧವ, ಅಳಲೇಕಾಯಿ, ಮುತ್ತುಗದಹೂಗಿನ. ಈ ನಾಲ್ಕನ್ನು ಕ್ರಿಮವೃದ್ಧಿಯಿಂದ ಚೂರ್ಣಿಸಿ, ನಿಂಬೇಹಣ್ಣಿನ ರಸದಿಂದ ಮರ್ದಿಸಿ, ಹುಡುಕುಗಳ ಮಾಡಿ, ನೆಳಲಲ್ಲಿ ಒಣಗಿಸಿ, ನಿಂಬೇಹಣ್ಣಿನ ರಸದಿಂದಲಾದರೂ, ಜೇನುತುಪ್ಪದಿಂದಲಾದರೂ ಕಣ್ಣಿಗೆ ಹಚ್ಚಲು ಬಿಸುವು, ಅರ್ಮ, ಕಾಚ ಮೊದಲಾದ ಸಮಸ್ತ ನೇತ್ರರೋಗಂಗಳೂ ಮಾಣುವದು.

ಶ್ಲೋ ॥ ಹತ್ಯಂಧಕಾಂ ಶರ್ಕರಯಾಭಿಷಿಕ್ತ । ನಕ್ತಾಂಧಕಾಂ ಗೋಶಕೃತಾಸಕೃಷ್ಣಾ ॥ ರಸಾಂಜನಂ ವ್ಯೋಷಯುತಂ ಚ ಪಿಲ್ಲಾಂ । ಕಾಚಂ ಸಶುಕ್ಲಂ ಮಧುನಾ ಚ ಶುಕ್ಲಂ ॥

ಟೀ ॥ ಶರ್ಕರೆಯನ್ನು, ಕಡಲನಾಲಿಗೆಯನ್ನು, ಜೇನುತುಪ್ಪದಿಂದ ಕಣ್ಣಿಗೆ ಹಚ್ಚಲು ದೃಷ್ಟಿಮಾಂದ್ಯ ಶಮನವಹುದು. ಹಸುವಿನ ಸಗಣೀರಸದಿಂದ ಹಿಪ್ಪಲಿಯಂ ತೇದು ಕಣ್ಣಿಗೆ ಹಚ್ಚಲು ಇರುಳುಗಣ್ಣು ಮಾಣುವದು. ರಸಾಂಜನವನ್ನು ತ್ರಿಕಟುವನ್ನು, ಜೇನುತುಪ್ಪದಿಂದ ಹಚ್ಚಲು ಪಿಲ್ಲಗಣ್ಣು ಗುಣವಹುದು. ಕಾಚವನ್ನು ಜೇನುತುಪ್ಪದಿಂದ ಹಚ್ಚಲು ಬಿಳುಪು ಶಮನವಹುದು.

ಶ್ಲೋ ॥ ದಧ್ನಾಭಿಘೃಷ್ಟಂ ಮರಿಚಂ ರಾತ್ರ್ಯಾಂಧ್ಯಾಂಜನಮುತ್ತಮಂ । ಸತೈಲಂ ದ್ರೋಣಪುಷ್ಪಾಂಬು ಕೃಷ್ಣಾ ವಾ ಸಶಕೃದ್ರಸಾ ॥

ಟೀ ॥ ಮೊಸರನೀರಿಂದ ಮೆಣಸಂ ತೇದು ಹಚ್ಚಲು ಇರುಳುಗಣ್ಣು ಮಾಣುವದು. ತುಂಬೇಹೂವಿನ ರಸವನ್ನು ಎಳ್ಳೆಣ್ಣೆಯೊಡಗೂಡಿ ಕಣ್ಣಿಗೆ ಹಚ್ಚಲು ಇರುಳುಗಣ್ಣು ಮಾಣುವದು. ಹಸುವಿನ ಸಗಣೀರಸದಿಂದ ಹಿಪ್ಪಲಿಯಂ ತೇದು ಹಚ್ಚಲು ಸಂಜೆಗಣ್ಣು ಮಾಣುವದು.

ಶ್ಲೋ ॥ ಮುನಿತರುದಳರಸಯುಕ್ತಂ ದಿನಕರಕರಶೋಷಿತಂ ಮರಿಚಂ । ಪುನರಪಿ ತೇನ ವಿಘೃಷ್ಟಂ ಪ್ರಣುದತಿ ದೋಷಾಂಧ್ಯಮಂಜನಂ ತೀವ್ರಂ ॥

ಟೀ ॥ ಅಗಸೇಸೊಪ್ಪಿನ ರಸದಲ್ಲಿ ಘಟ್ಟಿ ಮೆಣಸಂ ನೆನೆಯಿಕ್ಕಿ, ಬಿಸಿಲಲ್ಲಿ ಒಣಗಿಸಿ,

ಪುನಃ ನೆನಯಿಸಿ ಒಣಗಿಸುವದು. ಏಳುಬಾರಿ ಒಣಗಿಸಿಕೊಂಡು ಆ ರಸದಲ್ಲಿ ತೇಯುದು ಕಣ್ಣಿಗೆ ಹಚ್ಚಲು ಇರುಳುಗಣ್ಣು ಮಾಣುವದು.

ಶ್ಲೋ ॥ ಸಿಂಧೂತ್ಥತೈಲಂ ಸ್ತನಜೋಷಣಂಚ । ಶಾರ್ಙ್ಗೇರಿಪತ್ರಸ್ವರಸೇನ ಘೃಷ್ಟಂ । ಶಾಮ್ಯೇನ್ನನಕ್ತಾಂಧ್ಯಮಿದಂ ನಿರುನ್ಯಾ । ನಿಂಬಸ್ಯ ಬೀಜಂ ಮಧುಕಾಂಜನಂ ವಾ ॥

ಟೀ ॥ ಸೈಂಧವವನ್ನು, ಮೆಣಸನ್ನು, ಎಳ್ಳೆಣ್ಣೆ, ಮೊಲೆಹಾಲು, ಪುಳ್ಳಂಪುರಚೀಸೊಪ್ಪು, ಇವುಗಳನ್ನು ಬಿಟ್ಟುಕೊಂಡು ಕಂಚಿನ ತಳಿಗೆಮೇಲೆ ತೆಯಿಸಿ ತಾಮ್ರದ ಚೊಂಬಿನಿಂದ ಮರ್ದಿಸಿ ಕಣ್ಣಿಗೆ ಹಚ್ಚಲು ಸಂಜೆಗಣ್ಣು ಮಾಣುವದು. ಹಾಗೆಯೇ ಯಷ್ಟಿಮಧುಕವನ್ನು ಬೇವಿನಬೀಜದ ತಿರುಳನ್ನು ತಳಿಗೆಮೇಲೆ ಮರ್ದಿಸಿ ಕಣ್ಣಿಗೆ ಹಚ್ಚಲು ಸಂಜೆಗಣ್ಣು ಹೋಗುವುದು.

ಶ್ಲೋ ॥ ಘೃತಸಿದ್ಧಾನಿ ಜೀವಂತ್ಯಾಃ ಪಲ್ಲವಾನಿ ಚ ಭಕ್ಷಯೇತ್ । ಸಿದ್ಧಂ ಘೃತಂ ಕುಂಭಯೋನೇಃ ಪತ್ರೈಃ ಪಾನೇನ ಪೂಜಿತಂ ॥

ಟೀ ॥ ಸೀಹಾಲೆಸೊಪ್ಪನ್ನು ತುಪ್ಪದಲ್ಲಿ ಹುರಿದು ಮೆಲ್ಲಲು ಸಂಜೆಗಣ್ಣು ಮಾಣುವದು. ಅಕಲ್ಲಸಿದ್ದರೆ ಅಗಸೇಸೊಪ್ಪಿನ ರಸದಿಂದ ಪಾಕವಮಾಡಿದ ತುಪ್ಪವಂ ಪಾನಮಾಡಿಸಲು ಸಂಜೆಗಣ್ಣು ಮಾಣುವದು.

(ಸರ್ವನೇತ್ರರೋಗಕ್ಕೆ ಅನಂತಾದಿಘೃತ.)

ಶ್ಲೋ ॥ ಅನಂತಯಾ ಚಂದನಸಿತಯಾ ಮಧುಕೇನ ಚ । ಉತ್ಪಲೈಸ್ತ್ರಿಜ ಮೃಣಾಲೈಸ್ತ್ರಿಪದಾರ್ದ್ರ್ಯಾಚ ಕಶೇರುಕೈಃ ॥ ಅಜಾಪಯಸಾ ಪಿಷ್ಟ್ವಾ ಸರ್ಪಿಃ ಸಂಜಂ ವಿಪಾಚಯೇತ್ । ನಸ್ಯೈತತ್ಕರ್ಣೇ ವೇದಂ ಪರಿಷೇಕೇಷು ಶಸ್ಯತೇ ॥ ತಿಮಿರೇ ಕಾಚರೋಗೇ ಚ ನೇತ್ರಶೂಲೇ ತಥೈವ ಚ । ಅಭಿಷ್ಯಂದೇ ಚ ನಕ್ತಾಂಧ್ಯೇ ವರ್ತ್ಮಶುಕ್ಲೇ ಚ ಪೂಜಿತಂ । ಅನಂತಾದ್ಯಮಿದಂ ಸರ್ಪಿಃ ಸರ್ವನೇತ್ರಾಮಯಾಪಹಂ ॥

ಟೀ ॥ ಗಂಡುಮುರುಚನಬೇರು, ಶ್ರೀಗಂಧದ ಕೆತ್ತು, ಶರ್ಕರೆ, ಯಷ್ಟಿಮಧುಕ, ನೈದಿಲಗಡ್ಡೆ, ತಾವರೆಗೆಣಸು, ನೆಲಗುಂಬಳದ ಗೆಣಸು, ಕೊತ್ತಿಗಡ್ಡೆ, ಇವಿಷ್ಟನ್ನು ಸಮಾಂಶವಾಗಿ ಆಡಿನ ಹಾಲಿಂದ ಅರದು, ಆಡಿನ ತುಪ್ಪ ಕಲ್ಲಿಕಲೆಸಿ ನಸ್ಯ, ಆಶ್ಚ್ಯೋತನಗಳಂ ಮಾಡಿಸಲು ದೃಷ್ಟಿಮಾಂದ್ಯ, ಕಾಚರೋಗ, ನೇತ್ರಶೂಲೆ, ನೀರುಸುರಿವುದು, ಇರುಳುಗಣ್ಣು, ಹುಣ್ಣುಗಣ್ಣು, ಇವಿಷ್ಟೂ ಪರಿಹಾರವಹುವು. ಇದು ಅನಂತಾದ್ಯನಘೃತ, ಸಕಲ ನೇತ್ರರೋಗಹರ.

(ನೇತ್ರರೋಗಕ್ಕೆ ಜೀವಂತೀಘೃತ.)

ಶ್ಲೋ॥ ತುಲಾಂಪಚೇತ್ಜೀವಂತ್ಯಾಃ ದ್ರೋಣೇ ಪಾದಶೇಷಿತೇ ತೇನ ಕ್ವಾಥೇನ ದ್ವಿಗುಣಂ ಕ್ಷೀರಂ ಘೃತಪ್ರಸ್ಥಂ ವಿಪಾಚಯೇತ್ ॥ ಪ್ರಪೌಂಡರೀಕ ಕಾಕೋಲೀ ಪಿಪ್ಪಲೀ ಲೋಧ್ರ ಸೈಂಧವೈಃ । ಶತಾಹ್ವಾ ಮಧುಕ ದ್ರಾಕ್ಷಾ ಸಿತಾ ದಾರು ಫಲತ್ರಿಭಿಃ ॥ ಕಾರ್ಷಿಕೈರ್ನಿಶಿ ತತ್ಪೀತಂ ತಿಮಿರಾಹರಣಂ ಪರಂ ॥

ಟೀ॥ ನೂರುಹಲ ಸೀಹಾಲೆಸೊಪ್ಪನ್ನು ನಾಗುಳನೀರಲ್ಲಿ ಕಷಾಯವಿಕ್ಕಿ ನಾಲ್ಕುಭಾಗಾವಶೇಷವಾಗಿ ಕಾಯಿಸಿ ಉಳಿದ ಒಂದು ಕೊಳಗ ಕಷಾಯದಲ್ಲಿ ಎರಡು ಕೊಳಗ ಹಾಲಂ ಹನಿಸಿ, ಒಂದು ಬಳ್ಳ ಹಸುವಿನ ತುಪ್ಪವನ್ನು ಹನಿಸಿ ಕಾಯಿಸುವಾಗ ಅದಕ್ಕೆ ಹಾಕುವ ಕಲ್ಕದ್ರವ್ಯ—ಪ್ರಪೌಂಡರೀಕ, ಹಾಲಶೊಡ್ಡಿ, ಹಿಪ್ಪಲಿ, ಶಾಬರಲೋಧ್ರ, ಸೈಂಧವ, ಸಬ್ಬಸೀಗೆ, ಯಷ್ಟಿಮಧುಕ, ದ್ರಾಕ್ಷೀಹಣ್ಣು, ಶಕ್ಕರೆ, ದೇವದಾರು, ತ್ರಿಫಲೆ, ಇಷ್ಟನ್ನು ಪ್ರತ್ಯೇಕ ನಾಲ್ಕುವರಹ ತೂಕ ಚೂರ್ಣಿಸಿ ಹಾಕಿ ಕಾಯಿಸಿ ಹದದಲ್ಲಿ ಇಳುಹಿ ರಾತ್ರಿಹೊತ್ತು ಕುಡಿಸಲು ದೃಷ್ಟಿಮಾಂದ್ಯಪರಿಹಾರ, ಸಕಲನೇತ್ರರೋಗಹರ. ಇದು ಜೀವಂತೀಘೃತ.

(ಮತ್ಸ್ಯಾಕ್ಷೀಘೃತ.)

ಶ್ಲೋ॥ ಮತ್ಸ್ಯಾಕ್ಷೀಸ್ವರಸೇಸಿದ್ಧಂಘೃತಂಕ್ಷೀರಂಚತುರ್ಗುಣಂ । ಚಂದನೋತ್ಪಲಯಷ್ಟ್ಯಾಹ್ವಪತ್ತೂರಂತಂಡುಲೀಯಕಂ॥ ಕಲ್ಕೀಕೃತ್ಯತತೋಯೋಜ್ಯಂತರ್ಪಣಾರ್ತ್ರೈಃಪ್ರಣೇಷುಚ । ಅಭಿಷ್ಯಂದೇಧಿಮಂಥೇಚರಾಗೇಶೋಫೇಚದಾರುಣೇ ॥

ಟೀ॥ ಹೊನ್ನಗನ್ನೇಸೊಪ್ಪಿನರಸ ಒಂದು ಕೊಳಗದಲ್ಲಿ ಒಂದು ಬಳ್ಳ ಹಸುವಿನ ತುಪ್ಪವನ್ನು ನಾಲ್ಕು ಬಳ್ಳ ಹಸುವಿನ ಹಾಲನ್ನು ಹನಿಸಿ ಕಾಯಿಸುವಾಗ ಅದಕ್ಕೆ ಹಾಕುವ ಕಲ್ಕದ್ರವ್ಯ—ಶ್ರೀಗಂಧ, ನೈದಿಲಗಡ್ಡೆ, ಯಷ್ಟಿಮಧುಕ, ಹೊನ್ನಗನ್ನೇಬೇರು, ಚಿಲಕೀರೆಬೇರು, ಇಷ್ಟನ್ನು ಪ್ರತ್ಯೇಕ ನಾಲ್ಕುವರಹ ತೂಕಗಳನ್ನು ಕಲ್ಕವಮಾಡಿ ಹಾಕಿ ಪಾಕದಲ್ಲಿ ಇಳುಹಿ ಕಣ್ಣಿಗೆ ಆಶ್ಚ್ಯೋತನಗಳ ಮಾಡಿಸಲು ಹುಣ್ಣುಗಣ್ಣು, ನೀರು ಕೆಂಪು, ಇವೆಲ್ಲ ಪ್ರಶಮನವಹವು.

(ಪಂಚಾಮೃತಘೃತ.)

ಶ್ಲೋ॥ ವಟಾಕಶುಕ್ತಿಸ್ವಾರಸ್ಯಸ್ತನ್ಯದುಗ್ಧಂಚತಾಳಕಃ । ನಂದ್ಯಾವರ್ತಪ್ರಸೂನಂಚಶೀಗ್ರುಪಲ್ಲವಕೋರಸಃ ॥ ಕ್ಷೀರೋತ್ಥಿತಂಚಸರ್ಪಿಶ್ಚ

